

ಕರ್ನಾಟಕ ಸರ್ಕಾರ
**ಕನ್ನಡ ಪುಸ್ತಕ ಪ್ರಾಧಿಕಾರ**
ಬೆಂಗಳೂರು

# ಪುಸ್ತಕ ಲೋಕ

ಜನವರಿ - ಮಾರ್ಚ್ ೨೦೧೧
| ಸಂಪುಟ ೨ | ಸಂಚಿಕೆ ೩

ಪ್ರಧಾನ ಸಂಪಾದಕರು

**ಡಾ. ಸಿದ್ಧಲಿಂಗಯ್ಯ**

ಸಂಪಾದಕ

**ಜೆ. ಎನ್. ಶಾಮರಾವ್**

ವಿನ್ಯಾಸ

**ಯು. ಟಿ. ಸುರೇಶ್**

ಪ್ರಕಾಶಕರು

**ಬಿ. ಹೆಚ್. ಮಲ್ಲಿಕಾರ್ಜುನ,** ಕೆ.ಸಿ.ಎ.ಎಸ್.

ಆಡಳಿತಾಧಿಕಾರಿಗಳು

**ಕನ್ನಡ ಪುಸ್ತಕ ಪ್ರಾಧಿಕಾರ**

ಕನ್ನಡ ಭವನ, ಜೆ.ಸಿ. ರಸ್ತೆ

ಬೆಂಗಳೂರು-೫೬೦೦೦೨

ದೂರವಾಣಿ / ಫ್ಯಾಕ್ಸ್: ೦೮೦-೨೨೪೮೪೫೧೬



ಮುದ್ರಕರು

**ರಾಜಾ ಪ್ರಿಂಟರ್ಸ್**

ಬೆಂಗಳೂರು - ೨೭. ದೂರವಾಣಿ: ೨೨೨೩೪೮೦೬೬

---

ಮುಖಪುಟದ ಬುಕನನ್ ಟ್ರಾವಲ್ಸ್‌ನಲ್ಲಿನ ಮರದ ಪಡಿಯಚ್ಚಿನ ಚಿತ್ರ ಹಾಗೂ ಒಳಗಿನ ವಿನ್ಯಾಸಕ್ಕೆ ಬಳಸಿರುವ ಪಡಿಯಚ್ಚಿನ ಚಿತ್ರಗಳನ್ನು ಒದಗಿಸಿಕೊಟ್ಟ ಡಾ. ಅ.ಲ. ನರಸಿಂಹನ್ ಅವರಿಗೆ ಕೃತಜ್ಞತೆಗಳು

---

# ಪುಸ್ತಕ ಲೋಕ

ಜನವರಿ - ಮಾರ್ಚ್ ೨೦೧೧





# ಪುಸ್ತಕ ಲೋಕ

ಜನವರಿ - ಮಾರ್ಚ್ ೨೦೧೧

# ಪ್ರಧಾನ ಸಂಪಾದಕರ ಮಾತು

'ಪುಸ್ತಕಲೋಕ'ವು ಕನ್ನಡ ಪುಸ್ತಕೋದ್ಯಮದ ವಿವಿಧ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಲೇಖನಗಳನ್ನು ಪ್ರಕಟಿಸುತ್ತಾ ಬಂದಿದೆ.

'ಕನ್ನಡದಲ್ಲಿ ಲೇಖಕ-ಪ್ರಕಾಶಕ-ಓದುಗರ' ನಡುವೆ ಉತ್ತಮ ಸಂಬಂಧವನ್ನು ಏರ್ಪಡಿಸಿ, ಓದುಗರಲ್ಲಿ ಉತ್ತಮ ವಾಚನಾಭಿರುಚಿಯನ್ನು ಬೆಳೆಸಿ, ರಾಜ್ಯಾದ್ಯಂತ ಓದುಗರಿಗೆ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವ ಉದ್ದೇಶದಿಂದ ಆರಂಭವಾದ ಕನ್ನಡ ಪುಸ್ತಕ ಪ್ರಾಧಿಕಾರವು ಇದೀಗ ತನ್ನ ಆಲೋಚನೆ ಹಾಗೂ ಕಾರ್ಯಚಟುವಟಿಕೆಗಳ ಕ್ಷಿತಿಜವನ್ನು ವಿಸ್ತರಿಸಿಕೊಳ್ಳುವತ್ತ ಸಾಗಿದೆ. ಪುಸ್ತಕವನ್ನು ಸಾಂಸ್ಕೃತಿಕ-ಆರ್ಥಿಕ ವಲಯದ ಒಂದು ಉತ್ಪನ್ನವೆಂದು ಪರಿಗಣಿಸಬೇಕೆಂಬ ಹಂತವನ್ನು ತಲುಪಿದೆ; ಮುದ್ರಣ ಕಲೆಯನ್ನು ಪುಸ್ತಕ ಪ್ರಕಾಶನದ ಒಂದು ಭಾಗವೆಂದು ಪರಿಗಣಿಸುತ್ತಿದೆ.

ಈ ಹಿನ್ನೆಲೆಯಲ್ಲಿ 'ಪುಸ್ತಕಲೋಕ'ದ ಈ ಸಂಚಿಕೆಯನ್ನು ರೂಪಿಸಲಾಗಿದೆ. ಹಸ್ತಪ್ರತಿ ಸಂಪಾದನೆಯಿಂದ ಹಿಡಿದು ಪುಸ್ತಕ ಪ್ರಕಾಶನ ಒಳಗೊಳ್ಳುವ ವಿವಿಧ ಹಂತಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಒಟ್ಟಾರೆ ಪುಸ್ತಕೋದ್ಯಮದ ಸಮಸ್ಯೆಗಳ ಬಗೆಗೂ ವಿಶ್ಲೇಷಣೆ ನಡೆಸಲಾಗಿದೆ. ಲೇಖಕ-ಪ್ರಕಾಶಕರ ನಡುವಣ ಸಂಬಂಧದಲ್ಲಿ ಮಹತ್ತ್ವದ ಪಾತ್ರವನ್ನು ವಹಿಸುವ ಗ್ರಂಥಸ್ವಾಮ್ಯದ ಪ್ರಶ್ನೆಯನ್ನು ಈ ಸಂಚಿಕೆ ಒಳಗೊಂಡಿದೆ.

'ಪುಸ್ತಕಲೋಕ'ವನ್ನು ಹೊಸ ಸ್ವರೂಪದಲ್ಲಿ ಆರಂಭಿಸಿದ ದಿನದಿಂದ ಅದನ್ನು ಸಾಕಷ್ಟು ವೈವಿಧ್ಯಮಯವಾಗಿ, ಆಕರ್ಷಕವಾಗಿ ಹೊರತರಲು

# ಪ್ರಧಾನ ಸಂಪಾದಕರ ಮಾತು

ಪ್ರಯತ್ನಿಸಲಾಗುತ್ತಿದೆ. ಪುಸ್ತಕಲೋಕದ ವಿವಿಧ ವಿಷಯಗಳನ್ನು ಕುರಿತು ಪ್ರತಿ ಸಂಚಿಕೆಯನ್ನು ರೂಪಿಸಲಾಗುತ್ತಿದೆ.

ಕನ್ನಡ ಪುಸ್ತಕ ಪ್ರಾಧಿಕಾರದ ಮಹತ್ವದ ಆಶಯವಾದ 'ಕನ್ನಡ ಪುಸ್ತಕ ನೀತಿ'ಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿದೆ. ಪುಸ್ತಕನೀತಿಯನ್ನು ಯಥಾವತ್ತಾಗಿ ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.

ಲೇಖಕ-ಪ್ರಕಾಶಕರ ಸಂಬಂಧಗಳು ಭಾವನಾತ್ಮಕ ವಲಯದಿಂದ ವ್ಯಾವಹಾರಿಕ ವಲಯವನ್ನು ಪ್ರವೇಶಿಸಿರುವ ಹಂತದಲ್ಲಿ ಪುಸ್ತಕ ಒಂದು 'ಆರ್ಥಿಕ ಉತ್ಪನ್ನ'ದ ಸ್ವರೂಪವನ್ನು ಪಡೆದುಕೊಳ್ಳುವತ್ತ ಸಾಗಿದೆ. ಈಗ ಪುಸ್ತಕ ಪ್ರಕಾಶನಕ್ಕೆ ಒಂದು ಉದ್ಯಮದ ಮಾನ್ಯತೆ ದೊರೆಯಬೇಕಾದುದು ಅಗತ್ಯ. ಆದರೆ, ಪುಸ್ತಕವು ಮುಖ್ಯವಾಗಿ ಸೃಜನಶೀಲ ಉತ್ಪನ್ನವಾಗಿರುವುದರಿಂದ, ಈ ವ್ಯಾವಹಾರಿಕ ಭರಾಟೆಯಲ್ಲಿ ಅದರ ಸಾಂಸ್ಕೃತಿಕ ಮಹತ್ವ ಕಳೆದುಹೋಗದಂತೆ ನೋಡಿಕೊಳ್ಳುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ.

ಈ ಸಂಚಿಕೆಗೆ ಲೇಖನಗಳನ್ನು ಬರೆದುಕೊಟ್ಟ ಎಲ್ಲಾ ಲೇಖಕರಿಗೆ, ಸಂಪಾದಿಸಿಕೊಟ್ಟ ಶ್ರೀ ಜೆ.ಎನ್. ಶಾಮರಾವ್ ಅವರಿಗೆ ಹಾಗೂ ಈ ಕಾರ್ಯದಲ್ಲಿ ನೆರವಾದ ಆಡಳಿತಾಧಿಕಾರಿಗಳಾದ ಶ್ರೀ ಬಿ. ಹೆಚ್. ಮಲ್ಲಿಕಾರ್ಜುನ ಅವರಿಗೆ ಮತ್ತು ನನ್ನ ಆಪ್ತ ಕಾರ್ಯದರ್ಶಿ ಶ್ರೀ ಕೆ. ಮುಕುಂದನ್ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**ಡಾ। ಸಿದ್ಧಲಿಂಗಯ್ಯ**
ಅಧ್ಯಕ್ಷರು

# ಪುಸ್ತಕ ಸಂಪಾದನೆ



ಪ್ರೊ। ಎಲ್.ಎಸ್. ಶೇಷಗಿರಿರಾವ್

ಈ ಲೇಖನದ ವಸ್ತುವಾದ 'ಪುಸ್ತಕ ಸಂಪಾದನೆ'ಯು ಗ್ರಂಥಸಂಪಾದನೆಗಿಂತ ಭಿನ್ನವಾದ ಪ್ರಕ್ರಿಯೆ. 'ಗ್ರಂಥ ಸಂಪಾದನೆ' ಎಂದರೆ ಸಾಮಾನ್ಯವಾಗಿ ಪ್ರಾಚೀನ ಕೃತಿಯೊಂದನ್ನು ಆಧುನಿಕ ಓದುಗರಿಗಾಗಿ ಸಿದ್ಧಪಡಿಸುವ ಪರಿಷ್ಕರಣ. ಲಭ್ಯವಿರುವ ಎಲ್ಲ ಹಸ್ತಪ್ರತಿಗಳನ್ನು ಅಧ್ಯಯನ ಮಾಡಿ ಹೋಲಿಸಿ, ಅತ್ಯಂತ ಸ್ವೀಕಾರಾರ್ಹ ರೂಪವನ್ನು ಸಿದ್ಧಗೊಳಿಸುವ ವಿದ್ವತ್ತಿನ ಪ್ರಕ್ರಿಯೆ. ಈ ಲೇಖನದಲ್ಲಿ ಪರಿಶೀಲಿಸುತ್ತಿರುವುದು ನಮ್ಮ ಕಾಲದಲ್ಲಿ ಸಿದ್ಧವಾಗಿರುವ ಹಸ್ತಪ್ರತಿಯನ್ನು ಸಂಪಾದಕನು ಅಚ್ಚಿನ ಮನೆಗೆ ಕಳುಹಿಸುವ ಮುನ್ನ ಪರಿಷ್ಕರಿಸುವ ಪ್ರಕ್ರಿಯೆ.

ಸಂಪಾದಕನ ಮುಂದೆ ಇರುವ ಹಸ್ತಪ್ರತಿಯ ಸ್ವರೂಪ ಬೇರೆಬೇರೆ ರೀತಿಯದಾಗಿರಬಹುದು. ಅದು ಒಬ್ಬನೇ ಲೇಖಕನ ಒಂದು ಕೃತಿಯಾಗಿರಬಹುದು. ಒಬ್ಬನೇ ಲೇಖಕನ ಹಲವು ಬರಹಗಳ ಸಂಗ್ರಹವಾಗಿರಬಹುದು. ಅದರಲ್ಲಿ ಅಡಕವಾಗಿರುವ ಬರಹಗಳೆಲ್ಲ ಒಂದೇ ಸಾಹಿತ್ಯರೂಪಕ್ಕೆ ಸೇರಿರಬಹುದು. ಕವನಗಳು, ಕಥೆಗಳು, ಏಕಾಂಕ ನಾಟಕಗಳು, ವೈಜ್ಞಾನಿಕ ಬರಹಗಳು ಹೀಗೆ ಇಲ್ಲವೇ ಅದೊಂದು ಸಂಕೀರ್ಣ ಸಂಗ್ರಹವಾಗಿರಬಹುದು. ಅವನಿಗೆ ವಹಿಸಿರುವ ಕರ್ತವ್ಯದ ಹೊಣೆಯ ವ್ಯಾಪ್ತಿಯೂ ಒಂದೇ ಆಗಿರುವುದಿಲ್ಲ. ಅದರ ನ್ಯೂನತೆಗಳನ್ನು ಸರಿಪಡಿಸುವುದಷ್ಟೇ





ಇರಬಹುದು. ಓದುಗರಿಗೆ ನೆರವಾಗುವಂತೆ ಅದನ್ನು ಸಿದ್ಧಪಡಿಸುವ ಹೊಣೆ ಇರಬಹುದು. ಮುನ್ನುಡಿಯನ್ನು ಬರೆದು, ಇತರ ಟಿಪ್ಪಣಿಗಳನ್ನು (ಉದಾ : ಬೇರೆಬೇರೆ ಲೇಖಕರ ಬರಹಗಳಿದ್ದರೆ, ಲೇಖಕರ ಬಗೆಗೆ ಮಾಹಿತಿಯ ಟಿಪ್ಪಣಿಗಳನ್ನು) ನೀಡುವ ಹೊಣೆಗಾರಿಕೆ ಇರಬಹುದು. ವಿಮರ್ಶಾತ್ಮಕ ಲೇಖನದಲ್ಲಿ ಬರುವ ಪ್ರಸ್ತಾಪಗಳು ಮೊದಲಾದವುಗಳ ವಿವರಣೆಗಳನ್ನು ನೀಡುವ ಹೊಣೆಯೂ ಇರಬಹುದು. [ನಾನು ಕಂಡಿರುವ ಅತ್ಯಂತ ದಕ್ಷ ಮತ್ತು ಫಲಪ್ರದ ಸಂಪಾದನ ಮಾದರಿಯೊಂದನ್ನು ಇಲ್ಲಿ ಸ್ಮರಿಸಬಹುದು. (ಹಲವು ಕನ್ನಡ ಪುಸ್ತಕಗಳು ಈಚೆಗೆ ಈ ಮಾದರಿಯನ್ನು ಅನುಸರಿಸಿವೆ.) ಇದು ೧೯೭೨ರಲ್ಲಿ ಲಾಂಗ್‌ಮನ್ ಸಂಸ್ಥೆ ಪ್ರಕಟಿಸಿದ ಡೇವಿಡ್ ಲಾಜ್‌ರ 20th Century Literary Criticism-a Reader. ಇದರಲ್ಲಿ ಮೂರು ವಿಷಯಾನುಕ್ರಮಣಿಕೆಗಳಿವೆ–Contents arranged in chronological order of first publication; Contents arranged according to the literary form or topic principally discussed; Contents arranged according to the critical method or approach exhibited or discussed. 'The uses of this Book' ಎಂಬ ಶೀರ್ಷಿಕೆಯ ಸಂಪಾದಕರ ಮುನ್ನುಡಿ ಇದೆ. ಪ್ರತಿ ಲೇಖನದ ಪ್ರಾರಂಭದಲ್ಲಿ ಲೇಖನವನ್ನು ಕುರಿತ ವಿಮರ್ಶಾತ್ಮಕ ಸಂಗ್ರಹ ಟಿಪ್ಪಣಿ, ಅನಂತರ ಕೆಲವೇ ವಾಕ್ಯಗಳಲ್ಲಿ ಲೇಖಕನ ಪರಿಚಯ, ಕಡೆಯಲ್ಲಿ ಸಹಾಯಕ ಟಿಪ್ಪಣಿಗಳು. ಇದೇ ಸಂಕಲನದಲ್ಲಿ ಲೇಖನದ ವಸ್ತುವಿಗೆ ಸಂಬಂಧಿಸಿದ ಇತರ ಲೇಖನಗಳ ಪಟ್ಟಿ. ಇದೇ ವಸ್ತುವನ್ನು ಕುರಿತು ಉಪಯುಕ್ತ ಪರಿಶೀಲನೆ ಇರುವ ಇತರ ಕೃತಿಗಳ ಪಟ್ಟಿ, ಪುಸ್ತಕದ ಕಡೆಯಲ್ಲಿ ಒಂದು 'ಇಂಡೆಕ್ಸ್'.]

ಪ್ರತಿಯೊಂದು ಬರಹದ ಆಕರ, ಅದರ ಅಗತ್ಯವಾದ ವಿವರಗಳು, ಇವನ್ನು ಸಂಗ್ರಹದ / ಸಂಕಲನದ ಯಾವುದಾದರೂ ಭಾಗದಲ್ಲಿ ಸೂಚಿಸುವುದು ಅಗತ್ಯ. ಉದಾಹರಣೆ: ಲೇಖನದ ಕಡೆಯಲ್ಲಿ: 'ಪುಸ್ತಕ ಪ್ರೀತಿ' ೧೯೯೩, ಪುಟಗಳು ೩೭೪–೩೭೯ (೨) ಕಾವ್ಯ ಪ್ರತಿಮೆ, ೨೦೧೦, ಪುಟಗಳು ೧೫೪–೧೭೨.

ಸಂಪಾದಕರು ಪ್ರಕಟಣೆಯ ಬರಹರೂಪಕ್ಕೆ ಸಂಬಂಧಿಸಿದ ಕೆಲವು ಅಂಶಗಳಿಗೆ ಗಮನಕೊಡಬೇಕು. ಅಕಸ್ಮಾತ್ತಾಗಿ ನುಸುಳಿರುವ ಕಾಗುಣಿತದ ತಪ್ಪುಗಳನ್ನು ಸರಿಪಡಿಸಬೇಕೆಂದು ಹೇಳಲೇಬೇಕಾಗಿಲ್ಲ. ಹಲವು ಶಬ್ದಗಳ ಸ್ವೀಕಾರಾರ್ಹ ರೂಪಗಳ ಬಗೆಗೆ ಭಿನ್ನಾಭಿಪ್ರಾಯವಿರುತ್ತದೆ. (ಉದಾ : ಉದ್ದೇಶ, ಉದ್ದಿಶ್ಯ, ಅಂತರ್ರಾಷ್ಟ್ರೀಯ; ಅಂತರರಾಷ್ಟ್ರೀಯ; ಅಂತಾರಾಷ್ಟ್ರೀಯ) ಇಂಥ ಸಂದರ್ಭಗಳಲ್ಲಿ ಲೇಖಕರ ಅಭಿಪ್ರಾಯಕ್ಕೆ ಗೌರವ ಕೊಡುವುದು ಅಗತ್ಯ. ಒಬ್ಬರೇ ಲೇಖಕರ ಬರಹದಲ್ಲಿ ಏಕರೂಪ ಇರುವಂತೆ ನೋಡಿಕೊಳ್ಳುವುದು ಅಗತ್ಯ. ಯಾವುದು ಸರಿ, ಯಾವುದು ತಪ್ಪು ಎಂದು ನಿರ್ಧರಿಸುವುದು ಹಲವು ಸಂದರ್ಭಗಳಲ್ಲಿ ಕಠಿಣ (ಉದಹರಿಸು? ಉದಾಹರಿಸು?) Grammar follows usage ಎನ್ನುವುದೊಂದು ಪ್ರಸಿದ್ಧ ಸೂತ್ರ. ನನ್ನ ತಿಳಿವಳಿಕೆಯ ಪ್ರಕಾರ 'ಮೊರೆಹೊಗು' ಸರಿಯಾದ ರೂಪ; ಈಗ 'ಮೊರೆಹೋಗು' ಎನ್ನುವ ರೂಪ ಪತ್ರಿಕೆಗಳಲ್ಲಿ ಬಹುಮಟ್ಟಿಗೆ ಬಳಕೆಯಾಗುತ್ತಿದೆ. ಇಂಥ ಸಂದರ್ಭಗಳಲ್ಲಿ ಸಂಪಾದಕನು ತನ್ನ ವಿವೇಚನೆಯನ್ನು ಬಳಸಬೇಕಾಗುತ್ತದೆ. ಶೇಕ್ಸ್‌ಪಿಯರ್, ಷೇಕ್ಸ್‌ಪಿಯರ್ – ಯಾವುದು ಸರಿ? ಇಂಗ್ಲಿಷಿನ ಒಂದು ಧ್ವನಿಮಾಗೆ ಸಂವಾದಿಯಾಗಿ ಕನ್ನಡದಲ್ಲಿ ಎರಡು ಧ್ವನಿಮಾಗಳು (ಶ್, ಷ್) ಇರುವುದರಿಂದ ಇಲ್ಲಿ ಸರಿ, ತಪ್ಪುಗಳ ಪ್ರಶ್ನೆಯೇ ಇಲ್ಲ; ಇದು ಲೇಖಕನ ವೈಯಕ್ತಿಕ ಆಯ್ಕೆ. ಸಂಪಾದಕನು ಮೂಲ ಲೇಖಕರಿಗೆ ಬೇಸರವಾಗದಂತೆ ಎಚ್ಚರವಹಿಸಬೇಕು. ಇಲ್ಲಿಯೇ ಇನ್ನೊಂದು ಮಾತನ್ನು ಹೇಳಬಹುದು. ಹಲವು, ಇಂಗ್ಲಿಷ್ ಶಬ್ದಗಳನ್ನು ಕನ್ನಡದಲ್ಲಿ ಬಳಸುತ್ತೇವೆ. ಇದನ್ನು ಬಳಸುವಾಗ ಕನ್ನಡದಲ್ಲಿ ಒಂದು ರೂಪ ಸ್ವೀಕೃತವಾಗಿದ್ದರೆ ಅದನ್ನು ಬಳಸುವುದು ಸೂಕ್ತ. (ಉದಾಹರಣೆಗೆ : Ticket ಇಂಗ್ಲಿಷ್ ಉಚ್ಚಾರ 'ಟಿಕಿಟ್', ಕನ್ನಡದಲ್ಲಿ ಬಳಕೆಗೆ ಬಂದಿರುವ ರೂಪ 'ಟಿಕೆಟ್') ಸಾಧ್ಯವಾದಷ್ಟೂ ಮೂಲ ಇಂಗ್ಲಿಷ್ ಉಚ್ಚಾರಣೆಗೆ ಹತ್ತಿರ ಇರುವುದು ಸೂಕ್ತ. Edinburgh ಉಚ್ಚಾರಣೆ 'ಎಡಿನ್‌ಬರ'. 'ಎಡಿನ್‌ಬರೊ' ಒಪ್ಪಿಕೊಳ್ಳಬಹುದೇನೋ 'ಎಡಿನ್‌ಬರ್ಗ್' ಸ್ವೀಕಾರಾರ್ಹವಲ್ಲ. ಕನ್ನಡದಲ್ಲಿ ಕೆಲವೊಮ್ಮೆ

ಬಳಸುವ ವಿಕೃತರೂಪಗಳಂತೂ ತೀರ ಅಸಹ್ಯ, (ಉದಾ : Busy ಬ್ಯುಸಿ, receipt ರಸೀಪ್ಟ್, helicopter ಹೆಲಿಕ್ಯಾಪ್ಟರ್, ಇವು ದೂರ ಇಡಬೇಕಾದ ಕೆಟ್ಟ ರೂಪಗಳು) ಯಾವ ಒಳ್ಳೆಯ ಇಂಗ್ಲಿಷ್ ನಿಘಂಟಾದರೂ ಸರಿಯಾದ ರೂಪವನ್ನು ಕೊಡುತ್ತದೆ. ಡೇನಿಯಲ್ ಜೋನ್ಸ್‌ನ 'ಇಂಗ್ಲಿಷ್ ಪ್ರೊನೌನ್ಸಿಂಗ್ ಡಿಕ್ಷನರಿ'ಯು ಕೈಗೆಟಕುವಂತೆ ಇರುವುದು ಉತ್ತಮ. ಇಂಗ್ಲಿಷ್ ಭಾಗಗಳನ್ನು ಉದ್ಧರಿಸಿದಾಗ ದೊಡ್ಡಕ್ಷರ (ಕ್ಯಾಪಿಟಲ್ ಲೆಟರ್ಸ್) ಮತ್ತು ಸಣ್ಣಕ್ಷರಗಳ ಬಳಕೆಗೆ ಗಮನಕೊಡಬೇಕಾಗುತ್ತದೆ.

ಕೆಲವೊಮ್ಮೆ ಏಕರೂಪವನ್ನು ಸಾಧಿಸುವುದು ಒಂದು ಸವಾಲಾಗುತ್ತದೆ. ಕೇರಳ ಸಾಹಿತ್ಯ ಅಕಾಡೆಮಿಯ 'ಕಂಪ್ಯಾರಟಿವ್ ಇಂಡಿಯನ್ ಲಿಟರೇಚರ್' ಎರಡು ಸಂಪುಟಗಳ ಅನುವಾದ ಕಾರ್ಯದ ಸಂಪಾದಕತ್ವವನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ನನಗೆ ವಹಿಸಿತು. ಮೂಲದ ಸುಮಾರು ೨೨೫ ಲೇಖನಗಳನ್ನು ಸುಮಾರು ೧೦೨ ಮಂದಿ ಕನ್ನಡ ಲೇಖಕರು ದಯೆಯಿಟ್ಟು ಅನುವಾದಿಸಿಕೊಟ್ಟರು. ಲೆಕ್ಕವಿಲ್ಲದಷ್ಟು ಇಂಗ್ಲಿಷ್ ಶಬ್ದಗಳು ಹಲವು ಲೇಖನಗಳಲ್ಲಿ ಬಳಕೆ ಆಗಿದ್ದವು. 'ರಿನೇಸನ್ಸ್', 'ಇಮ್ಯಾಜಿನೇಷನ್', 'ಜೀನಿಅಸ್' ಇಂತಹ ಶಬ್ದಗಳಿಗೂ ಬೇರೆಬೇರೆ ಅನುವಾದಕರು ಬೇರೆ ಬೇರೆ ಸಮಾನ ಪದಗಳನ್ನು ಬಳಸಿದ್ದರು. ಪ್ರೊ ಟಿ. ಕೇಶವಭಟ್ಟರು ನನ್ನ ಕಾರ್ಯದಲ್ಲಿ ನೆರವಾದರು. ಎಷ್ಟೇ ಪ್ರಯತ್ನಿಸಿದರೂ ಕೆಲವು ಸಂದರ್ಭಗಳಲ್ಲಿ ಏಕರೂಪತೆಯನ್ನು ಸಾಧಿಸಲಾಗಲಿಲ್ಲ.

ಇದಕ್ಕೆ ಸಂಬಂಧಿಸಿದಂತೆ ಮತ್ತೊಂದು ಅಂಶವಿದೆ; ಇದು ಲೇಖನ ಚಿಹ್ನೆಗಳ ಬಳಕೆ. ವಾಕ್ಯಗಳನ್ನು ಗೊಂದಲವಿಲ್ಲದೆ ಅರ್ಥಮಾಡಿಕೊಳ್ಳಲು ಲೇಖನ ಚಿಹ್ನೆಗಳು ನೆರವಾಗುತ್ತವೆ. ಈ ನೆರವನ್ನು ಒದಗಿಸುವುದು ಲೇಖಕನ ಕರ್ತವ್ಯ; ಕೊರತೆ ಇದ್ದರೆ ತುಂಬಿಕೊಡುವುದು ಸಂಪಾದಕನ ಕರ್ತವ್ಯ. ಈ ನಿಟ್ಟಿನಲ್ಲಿ ಮತ್ತು ಇಡೀ ಪುಸ್ತಕ ಸಂಪಾದನ ಕಾರ್ಯದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿರುವ 'ಕನ್ನಡಶೈಲಿ ಕೈಪಿಡಿ' ತುಂಬಾ ನೆರವಾಗಬಲ್ಲದು. ಪ್ರತಿಯೊಬ್ಬ ಕನ್ನಡ ಲೇಖಕನ, ಸಂಪಾದಕನ ಮೇಜಿನ ಮೇಲೆ ಇರಬೇಕಾದ ಪ್ರಕಟಣೆ ಇದು.

ಬರಹವು ಆದಷ್ಟು ದೋಷಗಳಿಂದ ಮುಕ್ತವಾಗಿ, ಸ್ಪಷ್ಟವಾಗಿ, ನಿಖರವಾಗಿ ಸಂವಹನವನ್ನು ಸಾಧಿಸುವಂತೆ ಮಾಡುವುದು, ಸಂಪಾದಕನ ಗುರಿಯಾದದ್ದರಿಂದ ಹಲವು ಅಂಶಗಳಿಗೆ ಗಮನವನ್ನು ನೀಡಬೇಕಾಗುತ್ತದೆ, ಶ್ರಮಪಡಬೇಕಾಗುತ್ತದೆ. ಸಾಧ್ಯವಾದ ಮಟ್ಟಿಗೆ ಬರಹದಲ್ಲಿ ಬರುವ ಇಸವಿಗಳು ಮತ್ತು ಇತರ ಮಾಹಿತಿಯನ್ನು ಸರಿನೋಡಬೇಕಾಗುತ್ತದೆ. ನನ್ನ ಒಂದು ಅನುಭವವು ನೆನಪಿಗೆ ಬರುತ್ತದೆ. ಲೇಖಕರೊಬ್ಬರು ಬರೆದುಕೊಟ್ಟ ಪುಸ್ತಕದಲ್ಲಿ ಬ್ರಿಟಿಷ್ ವಿಜ್ಞಾನಿಯೊಬ್ಬ ಫ್ರಾನ್ಸಿಗೆ ಭೇಟಿಕೊಟ್ಟಾಗ ಒಬ್ಬ ಫ್ರೆಂಚ್ ವಿಜ್ಞಾನಿಯೊಡನೆ ಸಂಭಾಷಣೆ ನಡೆಸಿದ ಎಂದು ಬರೆದಿದ್ದರು. ನಾನು ವಿಶ್ವಕೋಶದಲ್ಲಿ ಮಾಹಿತಿಯನ್ನು ನೋಡಿದಾಗ ಅವರಿಬ್ಬರು ಹುಟ್ಟಿದ ವರ್ಷಗಳಲ್ಲಿ ಒಂದು ನೂರ ಇಪ್ಪತ್ತು ವರ್ಷಗಳ ಅಂತರವಿದ್ದದ್ದು ಕಂಡಿತು. ಲೇಖಕರನ್ನು ಸಂಪರ್ಕಿಸಿದಾಗ ಅವರು ತಮ್ಮ ನೆನಪನ್ನೇ ನೆಚ್ಚಿದ್ದುದು ತಿಳಿಯಿತು. ಇಸವಿಗಳು, ವಾಸ್ತವಾಂಶಗಳು ಇವನ್ನು ಸಾಧ್ಯವಾದಮಟ್ಟಿಗೂ ಸರಿನೋಡಬೇಕಾಗುತ್ತದೆ. (ಪಾಶ್ಚಾತ್ಯ ದೇಶಗಳ ಪ್ರತಿಷ್ಠಿತ ಸಂಸ್ಥೆಗಳು ತಮ್ಮ ವಿದ್ವತ್ಪತ್ರಿಕೆಗಳಲ್ಲಿ ಲೇಖನವನ್ನು ಪ್ರಕಟಿಸುವಾಗ ಪ್ರತಿ ಉದ್ಧೃತ ಭಾಗವನ್ನೂ ಸರಿನೋಡುತ್ತವೆ.) ಪ್ರಕಟಣೆ ಯಾವ ಓದುವ ವರ್ಗವನ್ನು ಗಮನದಲ್ಲಿಟ್ಟುಕೊಂಡಿದೆ ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಸಂಪಾದಕನು ಅಗತ್ಯವಾದಾಗ ಟಿಪ್ಪಣಿಗಳನ್ನು ಒದಗಿಸಬೇಕಾಗುತ್ತದೆ. ಸಾಮಾನ್ಯ ಓದುಗರಿಗಾಗಿ ಬರೆದ ಬರಹದಲ್ಲಿ 'ಹಲ್ಮಿಡಿ ಶಾಸನ' ಟಾಲ್‌ಸ್ಟಾಯಿಯ 'ಆನ ಕರೇನಿನ', 'ಕೊಪರ್ನಿಕಸನ ಸಿದ್ಧಾಂತ' ಇಂಥ ಪ್ರಸ್ತಾಪಗಳು ಬಂದರೆ ಅವು ಅರ್ಥವಾಗುವುದಿಲ್ಲ. ವಿಜ್ಞಾನಿಗಳೊಬ್ಬರು " 'ಕಾಜಿಟೊ ಎರ್ಗೊ ಸಮ್' ಎನ್ನುವ ಹೇಳಿಕೆಯೇ ಕ್ರಾಂತಿಕಾರಿಯಾಗಬಲ್ಲದು" ಎಂದು ಬರೆದರು. ಇದು ಪಾಶ್ಚಾತ್ಯ ವಿಜ್ಞಾನ, ತತ್ವಶಾಸ್ತ್ರಗಳ ಪರಿಚಯವಿರುವವರಿಗೆ ಸುಲಭವಾಗಿ ಅರ್ಥವಾಗುವ ಪ್ರಸಿದ್ಧ ಘೋಷಣೆ. ಆದರೆ ಸಾಮಾನ್ಯ ಕನ್ನಡ ಓದುಗರಿಗೆ ಇದು ಅರ್ಥವಾಗಲು ಒಂದು ಟಿಪ್ಪಣಿಯನ್ನು ಸೇರಿಸಬೇಕಾಗುತ್ತದೆ. ಹಲವರು ವ್ಯಕ್ತಿಗಳ ಹೆಸರುಗಳಲ್ಲಿ ಹೋಲಿಕೆ ಇರುತ್ತವೆ. ಉದಾಹರಣೆಗೆ, ವಿ.ಸೀ., ಎಂ.ವಿ.ಸೀ., ಡಿ.ಎಲ್. ನರಸಿಂಹಾಚಾರ್, ಪು.ತಿ. ನರಸಿಂಹಾಚಾರ್, (ಇಂಗ್ಲಿಷ್ ಸಾಹಿತ್ಯದಲ್ಲಿ) ಬೆನ್ ಜಾನ್‌ಸನ್, ಡಾ. ಜಾನ್‌ಸನ್, ಜಾರ್ಜ್ ಎಲ್ಯಟ್, ಟಿ.ಎಸ್. ಎಲ್ಯಟ್) ಇಂಥ ಹೆಸರುಗಳು ಬಂದಾಗ ಎಚ್ಚರಿಕೆಯಿಂದ ಸರಿನೋಡಬೇಕು. (ಅಲ್ಲದೆ ಸರಿಯಾದ ರೂಪವನ್ನು ಬಳಸಬೇಕು. 'ವಿ.ಸೀ.' ಎನ್ನುವುದು ಡಾ. ವಿ. ಸೀತಾರಾಮಯ್ಯನವರ ಹೆಸರಿನ ಹ್ರಸ್ವರೂಪ, ಸಾಮಾನ್ಯವಾಗಿ ಕನ್ನಡದಲ್ಲಿ



'ವೀ.ಸಿ.ಎಂದು ಉಚ್ಚರಿಸಿಬಿಡುವುದುಂಟು. ಹಲವರು ಬರಹದಲ್ಲಿಯೂ ಇದೇ ರೂಪವನ್ನು 'ವೀ.ಸಿ.', ಎಂದು ಬಳಸುತ್ತಿದ್ದರು. ಡಾ.ವಿ.ಸೀ. ಅವರು ಮುಜಗರಪಟ್ಟುಕೊಳ್ಳುತ್ತಿದ್ದರು.)

ಸಂಪಾದಕನು ಬರಹವನ್ನು ಆದಷ್ಟು ದೋಷಮುಕ್ತವನ್ನಾಗಿ ಮಾಡಬೇಕು ಎಂದು ಹೇಳಿದೆ. ಆದರೆ ಲೇಖಕರಿಗೆ ಗೌರವವನ್ನು ಕೊಡುವುದು ತೀರ ಅಗತ್ಯ. ಉದಾಹರಣೆಯಾಗಿ ನನ್ನ ಒಂದು ಅನುಭವವನ್ನು ಸ್ಮರಿಸಬಹುದು. ಲೇಖನದ ಉದ್ಧೃತ ಭಾಗಗಳನ್ನು ಸರಿನೋಡಬೇಕೆಂದು ಹೇಳಿದೆ. ಖ್ಯಾತ ಸಸ್ಯವಿಜ್ಞಾನ ಪ್ರಾಧ್ಯಾಪಕರು ಡಾ। ಬಿ. ಜಿ. ಎಲ್. ಸ್ವಾಮಿ ನನಗೆ ಹತ್ತಿರದ ಸ್ನೇಹಿತರು. ಅವರೊಮ್ಮೆ ಒಂದು ಲೇಖನವನ್ನು ಬರೆದುಕೊಟ್ಟರು. ಅವರ ಆಸಕ್ತಿಗಳ ವ್ಯಾಪ್ತಿ ಬೆರಗುಗೊಳಿಸುವಂಥದು. ತಮ್ಮ ಲೇಖನದಲ್ಲಿ ಬಹುಪ್ರಸಿದ್ಧ ಇಂಗ್ಲಿಷ್ ಕವಿ ಜಾನ್ ಮಿಲ್ಟನ್‌ನ 'ಅಸಿಡಾಸ್' ಕವನದಿಂದ ಕೆಲವು ಪಂಕ್ತಿಗಳನ್ನು ಉದ್ಧರಿಸಿದ್ದರು. ಇದು ನನಗೆ ಬಹಳ ಪರಿಚಿತವಾದ ಕವನ. ಆದರೆ ಅವರು ಉದ್ಧರಿಸಿದ ಪಂಕ್ತಿಗಳು ನನಗೆ ಪರಿಚಿತ ರೂಪದಿಂದ ಭಿನ್ನವಾದವು. ನಾನು ಅವರಿಗೆ ಪತ್ರ ಬರೆದೆ. ಅವರು ತಾವು ಉದ್ಧರಿಸಿದ ರೂಪವನ್ನು ಲಂಡನ್ನಿನ ಬ್ರಿಟಿಷ್ ಮ್ಯೂಸಿಯಂನಲ್ಲಿದ್ದ ಒಂದು ಪರಿಷ್ಕೃತ ಹಸ್ತಪ್ರತಿಯಿಂದ ತೆಗೆದುಕೊಂಡದ್ದಾಗಿ ತಿಳಿಸಿ, ಆ ಪ್ರಸ್ತಾಪವಿದ್ದ ಒಂದು ವಿದ್ವತ್‌ಪೂರ್ಣ ಗ್ರಂಥದ ಪುಟವನ್ನು ಕ್ಸಿರಾಕ್ಸ್ ಮಾಡಿ ಕಳುಹಿಸಿದರು. ನಾನು ಅವರು ಬಳಸಿದ್ದ ರೂಪವನ್ನೆ ಉಳಿಸಿಕೊಂಡೆ.

ಪುಸ್ತಕದ 'ಪ್ರೊಡಕ್‌ಷನ್'ನ ವಿವರಗಳನ್ನು ನಿರ್ಧರಿಸುವಲ್ಲಿ ಮುದ್ರಕರ ಮತ್ತು ಪ್ರಕಾಶಕರ ಪಾತ್ರ ತಕ್ಕಷ್ಟಿರುತ್ತದೆ. ಹಲವು ವಿವರಗಳನ್ನು ಅವರೊಡನೆ ಚರ್ಚೆಯಲ್ಲಿ ನಿರ್ಧರಿಸಬೇಕಾಗುತ್ತದೆ. ಆದರೆ ಹಸ್ತಪ್ರತಿಯ ಸಿದ್ಧತೆಯ ಘಟ್ಟದಲ್ಲಿ ಮತ್ತು ಅನಂತರ ಸಂಪಾದಕನು ಹಲವು ಅಂಶಗಳಿಗೆ ಗಮನಕೊಡಬೇಕಾಗುತ್ತದೆ. ಕೆಲವು ಕೃತಿಗಳು 'ಪುಸ್ತಕ'ಗಳಾಗಿ ವಿಭಾಗವಾಗಿರುತ್ತವೆ. ಈ ಪುಸ್ತಕಗಳು ಅಧ್ಯಾಯಗಳಾಗಿ ವಿಭಾಗವಾಗಿರುತ್ತವೆ. ಪ್ರತಿ 'ಪುಸ್ತಕ'ಕ್ಕೂ ಅಧ್ಯಾಯಕ್ಕೂ ಶೀರ್ಷಿಕೆ ಇರುತ್ತದೆ, ನೋಡಿಕೊಳ್ಳಬೇಕು. 'ಪುಸ್ತಕ'ಗಳಿಗೆಲ್ಲ ಒಂದೇ ಫಾಂಟ್, ಅಧ್ಯಾಯಗಳಿಗೆಲ್ಲ ಒಂದೇ ಫಾಂಟ್ ಬಳಕೆಯಾಗಬೇಕು. ಚಿತ್ರಗಳನ್ನು ಅಳವಡಿಸಬೇಕಾದರೆ ಅವುಗಳು ಎಲ್ಲಿ ಬರಬೇಕು, ಪ್ರತಿ ಚಿತ್ರದ ಶೀರ್ಷಿಕೆ ಏನು ಎಂದು ನಿರ್ಧರಿಸಿ, ಇಲ್ಲಿಯೂ ಫಾಂಟ್‌ಗಳ ಬಳಕೆಯಲ್ಲಿ ಏಕರೀತಿ ಇರುವಂತೆ ಎಚ್ಚರವಹಿಸಬೇಕು. 'ವಿಷಯಾನುಕ್ರಮಣಿಕೆ' ಸಿದ್ಧವಾಗುವುದು ಪುಸ್ತಕದ ಓದುವ ಭಾಗ ಅಚ್ಚಾದ ಮೇಲೆ, ಅದನ್ನೇ ಇಟ್ಟುಕೊಂಡು ಪುಟಸಂಖ್ಯೆಗಳನ್ನು ಸೇರಿಸಬೇಕು. (ಒಂದು ಪ್ರತಿಷ್ಠಿತ ಸಂಸ್ಥೆಯು ಕಥೆಗಳ ಸಂಗ್ರಹವನ್ನು ಪ್ರಕಟಿಸಿತು. ಮೊದಲನೆಯ ಕಥೆಯನ್ನು ಬಿಟ್ಟು ಬೇರೆ ಯಾವುದರ ಪುಟಸಂಖ್ಯೆಗಳೂ ಹೊಂದಾಣಿಕೆಯಾಗಲಿಲ್ಲ.) ಪುಸ್ತಕದ ರಕ್ಷಾಪುಟ ಮತ್ತಿತರ ಪುಟಗಳಿಗೆ ಗಮನಕೊಡಬೇಕು. ಗ್ರಂಥಸ್ವಾಮ್ಯದ ವಿವರವನ್ನು ಖಚಿತವಾಗಿ, ಸ್ಪಷ್ಟವಾಗಿ ನಮೂದಿಸಬೇಕು. ಇದು ಅನೇಕಬಾರಿ ತೊಂದರೆಗೆ ದಾರಿಮಾಡಿಕೊಡುತ್ತದೆ. ಯಾವ ಬರಹವನ್ನಾದರೂ ಆಯ್ಕೆ ಮಾಡಿದಾಗ ಲೇಖಕರಿಂದ (ಅಥವಾ ಗ್ರಂಥಸ್ವಾಮ್ಯದ ಹಕ್ಕು ಇರುವವರಿಂದ) ಸ್ಪಷ್ಟವಾಗಿ ಬರಹದಲ್ಲಿ ಒಪ್ಪಿಗೆ ಪಡೆಯಬೇಕು. ಈ ವಿಷಯದಲ್ಲಿ ನನ್ನ ಕಹಿ ಅನುಭವಗಳಿಂದಾಗಿ ಈ ಮಾತನ್ನು ಒತ್ತಿಹೇಳುತ್ತಿದ್ದೇನೆ.



ಹಲವರ ಬರಹಗಳ ಸಂಕಲನವನ್ನು ಸಿದ್ಧಪಡಿಸುವಾಗ ಲೇಖಕರ ಹೆಸರು ಪ್ರತಿ ಲೇಖನದ ಪ್ರಾರಂಭದಲ್ಲಿ ಬರಬೇಕೆ, ಕಡೆಯಲ್ಲಿಯೆ ಎಂಬುದನ್ನು ನಿರ್ಧರಿಸಬೇಕು. ಅವರ ಹೆಸರಿನ ಹಿಂದುಗಡೆ ಡಾಕ್ಟರ್, ಪ್ರೊಫೆಸರ್ ಮುಂತಾದ ಸೂಚಕಗಳಿರಬೇಕೆ ಬೇಡವೆ, ಈ ಸೂಚಕಗಳು ಇಲ್ಲದಿದ್ದಾಗ ಶ್ರೀ ಶ್ರೀಮತಿ ಎನ್ನುವುದನ್ನು ಸೇರಿಸಬೇಕೆ ಎಂಬುದನ್ನು ನಿರ್ಧರಿಸಬೇಕು. ವಿಷಯಾನುಕ್ರಮಣಿಕೆಯಲ್ಲಿಯೂ ಈ ವಿವರಗಳಿಗೆ ಗಮನಕೊಡಬೇಕು.

ಹಲವು ಪುಸ್ತಕಗಳಿಗೆ ವಿಷಯಸೂಚಿ (ಇಂಡೆಕ್ಸ್) ಅಗತ್ಯವಾಗುತ್ತದೆ. ಕೆಲವು ಪುಸ್ತಕಗಳಂತೂ ವಿಷಯಸೂಚಿ ಇಲ್ಲದೆ ಅಪೂರ್ಣವಾಗುತ್ತವೆ. ಅವುಗಳ ಉಪಯುಕ್ತತೆಗೇ ಕುಂದುಬರುತ್ತದೆ.

ಸಂಪಾದಕತ್ವದ ಹೊಣೆಯನ್ನು ಒಪ್ಪಿಕೊಂಡವರು ಹಲವೊಮ್ಮೆ ಇಕ್ಕಟ್ಟಿನ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಲೇಖಕರ ಗೌರವಕ್ಕು ಕುಂದುಬಾರದೆ ತನ್ನ ಗೌರವಕ್ಕು ಚ್ಯುತಿಬಾರದೆ ಇರುವಂತೆ ನಿರ್ಧಾರಗಳನ್ನು ಕೈಗೊಳ್ಳಬೇಕಾಗುತ್ತದೆ. ಇಂಥ ಕೆಲವು ಪ್ರಸಂಗಗಳನ್ನು ಸ್ಮರಿಸಬಹುದು. ಸಿಡ್ನಿ ಕೆರ್‍ಯ್ನ್ ಎನ್ನುವ ವಿಮರ್ಶಕ ಒಂದು ಅನುಭವವನ್ನು ಹೇಳುತ್ತಾನೆ. ಷೇಕ್ಸ್‌ಪಿಯರ್ ಹುಟ್ಟಿ ನಾಲ್ಕು ನೂರು ವರ್ಷಗಳಾದ ಸಂದರ್ಭದಲ್ಲಿ ಅವನ ಗಂಭೀರ ನಾಟಕಗಳು ಮತ್ತು ಕಡೆಯ ನಾಟಕಗಳನ್ನು ಕುರಿತು ಲೇಖನವನ್ನು ಬರೆದುಕೊಡುವಂತೆ ಒಬ್ಬ ಪ್ರಸಿದ್ಧ ಷೇಕ್ಸ್‌ಪಿಯರ್ ವಿಮರ್ಶಕನನ್ನು ಪ್ರಾರ್ಥಿಸಿದರು. ಆತ ಬರೆದೂ ಕೊಟ್ಟರು. ಆದರೆ ಅದರಲ್ಲಿ ಅಚ್ಚರಿ ಮೂಡಿಸುವಂತಹ ಹಲವು ತಪ್ಪುಗಳಿದ್ದವು. ಲೇಖನವೂ ಕಳಪೆಯಾಗಿತ್ತು. ಕೆರ್‍ಯ್ನ್ ಅವನಿಗೆ ಕಾಗದ ಬರೆದು ಬಹುಸೂಕ್ಷ್ಮವಾಗಿ ಕೆಲವು ತಪ್ಪುಗಳನ್ನು ತೋರಿಸಿ "ಲೇಖನವನ್ನು ಒಮ್ಮೆ ಪರಿಷ್ಕರಿಸಲು ಬಯಸುವಿರ?" ಎಂದು ಕೇಳಿದ. ವಿಮರ್ಶಕ ಆ ತಪ್ಪುಗಳನ್ನು ತಿದ್ದಿ ಬೇರೆ ಬದಲಾವಣೆಗಳನ್ನು ಮಾಡದೆ ಲೇಖನವನ್ನು ಕಳುಹಿಸಿದ. ಕೆರ್‍ಯ್ನ್ ಶೀರ್ಷಿಕೆಯಲ್ಲಿ ಮಾತ್ರ ಸ್ವಲ್ಪ ಮಾರ್ಪಾಟುಮಾಡಿ ಅದೇ ವಿಷಯವನ್ನು ಕುರಿತು ಲೇಖನ ಬರೆಯಲು ಮತ್ತೊಬ್ಬ ವಿಮರ್ಶಕನನ್ನು ಪ್ರಾರ್ಥಿಸಿ, ಎರಡು ಲೇಖನಗಳನ್ನೂ ಪ್ರಕಟಿಸಿದ. ನನ್ನ ಒಂದೆರಡು ಅನುಭವಗಳನ್ನು ಓದುಗರೊಡನೆ ಹಂಚಿಕೊಳ್ಳಬಹುದು. ಸಂಪಾದಕನಾಗಿ ಕನ್ನಡ ಸಾಹಿತ್ಯವನ್ನು ಕುರಿತು ಇಂಗ್ಲಿಷಿನಲ್ಲಿ ಲೇಖನಗಳನ್ನು ಬರೆಸುವ ಕರ್ತವ್ಯ ನನ್ನ ಪಾಲಿಗೆ ಬಂದಿತು. ಒಬ್ಬ ಪ್ರಸಿದ್ಧ ವಿಮರ್ಶಕರು ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದ ಒಂದು ಕೃತಿಯನ್ನು ಕುರಿತು It is a monument to wasted labour ಎಂದು ಬರೆದರು. ನಾನು ಅವರಿಗೆ ಪತ್ರ ಬರೆದೆ. ಅವರು, "ಇದು ವಿಮರ್ಶಕನಾಗಿ ನನ್ನ ಅಭಿಪ್ರಾಯ", ಎಂದು ಬರೆದರು. ನಾನು, "ನಿಮ್ಮ ಅಭಿಪ್ರಾಯವನ್ನು ಬದಲಿಸಿ ಎಂದು ಕೇಳುವುದಿಲ್ಲ. ಆದರೆ ಈ ಕೃತಿಗೆ ರಾಜ್ಯಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿಗಳು ಬಂದಿವೆ. ನಿಮ್ಮ ಅಭಿಪ್ರಾಯವು ಈ ಪ್ರಸಸ್ತಿಗಳನ್ನು ನೀಡಿದ ಸಂಸ್ಥೆಗಳಿಗೂ ಗೌರವ ತರುವುದಿಲ್ಲ. ಹೀಗೆಯೇ ಅಚ್ಚುಮಾಡಬೇಕೆಂದರೆ ನಿಮ್ಮ ಅಭಿಪ್ರಾಯವನ್ನು ಗೌರವಿಸಿ ಅಚ್ಚುಮಾಡುತ್ತೇನೆ. ಆದರೆ ನನ್ನ ಅಡಿಟಿಪ್ಪಣಿಯನ್ನು ಸೇರಿಸಿ, ಇದಕ್ಕೆ ಭಿನ್ನವಾದ ಅಭಿಪ್ರಾಯವನ್ನು ಹಲವರು ಪ್ರಮುಖ ವಿಮರ್ಶಕರು, ಹಲವು ಸಾಹಿತ್ಯ ಸಂಸ್ಥೆಗಳು, ವ್ಯಕ್ತಪಡಿಸಿದೆ ಎಂದು ತಿಳಿಸುತ್ತೇನೆ. ಕನ್ನಡದ ವಿಮರ್ಶಕನಾಗಿ ನನಗೆ ಒಂದು ಹೊಣೆ ಇದೆ. ತಪ್ಪು ತಿಳಿಯಬೇಡಿ", ಎಂದು ಬರೆದೆ. ಅವರೇ ಕೆಲವು ದಿನಗಳಲ್ಲಿ ಕೆಲಸದ ಮೇಲೆ ಬೆಂಗಳೂರಿಗೆ ಬರುವವರಿದ್ದರು. ಇಬ್ಬರೂ ಸೇರಿ ಚರ್ಚೆ ಮಾಡಿದನಂತರ, ಅವರು ತಮ್ಮ ಅಭಿಪ್ರಾಯವನ್ನು ಇನ್ನಷ್ಟು ಸೌಮ್ಯವಾಗಿ ಹೇಳಿ, ಇನ್ನೊಂದು ಅಭಿಪ್ರಾಯವಿದೆ ಎನ್ನುವುದನ್ನು ಸೂಚಿಸಿ ಲೇಖನದಲ್ಲಿ ಮಾರ್ಪಾಟು ಮಾಡಲು ಒಪ್ಪಿದರು. 'ಕಂಪ್ಯಾರಟಿವ್ ಇಂಡಿಯನ್ ಲಿಟರೇಚರ್'ನ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸುವ ಸಾಹಸದ ವಿಷಯ ಆಗಲೇ ಪ್ರಸ್ತಾಪಿಸಿದ್ದೇನೆ. ಕನ್ನಡದಲ್ಲಿ ಹಲವು ಪುಸ್ತಕಗಳನ್ನು ಬರೆದಿದ್ದ ಇಂಗ್ಲಿಷ್ ಪ್ರಾಧ್ಯಾಪಕರೊಬ್ಬರಿಗೆ ಒಂದು ಇಂಗ್ಲಿಷ್ ಲೇಖನವನ್ನು ಅನುವಾದಿಸಿ ಕೊಡಲು ಪ್ರಾರ್ಥಿಸಿದೆ. ಅವರು ಒಪ್ಪಿಕೊಂಡರು. ಆದರೆ ತೀರ ವಿಳಂಬ ಮಾಡಿದರು. ಅಚ್ಚಿನ ಕೆಲಸ ಮುಂದುವರೆದು ಅವರ ಲೇಖನ ತೀರ ತ್ವರಿತವಾಗಿ ಅಗತ್ಯವಾದಾಗ ನಾನು ದೂರವಾಣಿಯಲ್ಲಿ ಅವರೊಂದಿಗೆ ಮಾತನಾಡಿದೆ. ಮೂರು ನಾಲ್ಕು ದಿನಗಳಲ್ಲಿ ಅನುವಾದ ಕೈಸೇರಿತು. ಆದರೆ ಮೂಲದೊಡನೆ ಹೋಲಿಸಿದಾಗ ತಪ್ಪು ಅನುವಾದಗಳ ಮಾಲೆಯೇ ಕಂಡಿತು. ನಾನು ನನಗೆ ಆಪ್ತರಾಗಿದ್ದ ಬೆಂಗಳೂರಿನ ಒಬ್ಬ ಇಂಗ್ಲಿಷ್ ಪ್ರಾಧ್ಯಾಪಕರನ್ನು "ದಯೆಯಿಟ್ಟು ೩-೪ ದಿನಗಳಲ್ಲಿ ಈ ಲೇಖನವನ್ನು ಅನುವಾದಿಸಿಕೊಡಿ" ಎಂದು ಪ್ರಾರ್ಥಿಸಿದೆ. ಅವರು ಸೊಗಸಾಗಿ ಅನುವಾದ ಮಾಡಿಕೊಟ್ಟರು. ಮೊದಲು ಅನುವಾದ ಮಾಡಿದವರಿಗೂ ಗೌರವ ಸಂಭಾವನೆ, ಕಳುಹಿಸಿದೆ. (ಪುಸ್ತಕವು ಪ್ರಕಟವಾದ ನಂತರ ಮೊದಲು ಅನುವಾದ ಮಾಡಿದವರು, 'ನನ್ನ ಅನುವಾದವನ್ನು ಪ್ರಕಟಿಸದೆ ಬೇರೊಬ್ಬರ ಅನುವಾದವನ್ನು ಪ್ರಕಟಿಸಿ ನನಗೆ ಅವಮಾನ ಮಾಡಿದಿರಿ' ಎಂದು ಕೋಪದಿಂದ ಪತ್ರ ಬರೆದರು. ನಾನು ಮೂಲ ಇಂಗ್ಲಿಷ್ ಲೇಖನದ ಕೆಲವು ವಾಕ್ಯಗಳು, ಅವರ ಅನುವಾದ – ಇದನ್ನು ಪಕ್ಕಪಕ್ಕದಲ್ಲಿ ಬರೆದು, "ಈ ಅನುವಾದವನ್ನು ಪ್ರಕಟಿಸಿದ್ದರೆ ಓದುಗರು ತಮ್ಮ ವಿಷಯ ಏನು ಭಾವಿಸುತ್ತಿದ್ದರು" ಎಂದು ಕೇಳಿ ಪತ್ರ ಬರೆದೆ.)

ಇಂಥ ಅನುಭವಗಳು ಹಲವು. ಇನ್ನೊಂದೇ ಪ್ರಸಂಗವನ್ನು ಹೇಳುತ್ತೇನೆ. ಹಿರಿಯರೊಬ್ಬರಿಗೆ ಅರ್ಪಿಸಲು ಒಂದು ಗೌರವ ಗ್ರಂಥವನ್ನು ನಾನು ಸಂಪಾದಿಸಬೇಕಾಗಿ ಬಂತು. ಆ ಹಿರಿಯರೇ ಹೆಸರು ಸೂಚಿಸಿದ ಒಬ್ಬರಿಗೆ ಒಂದು ಲೇಖನವನ್ನು ಬರೆದುಕೊಡಲು ಪ್ರಾರ್ಥಿಸಿದೆ. ಅವರು ಲೇಖನವನ್ನು ಕಳುಹಿಸಿದರು. ಆದರೆ ಅದರಲ್ಲಿ ಒಂದು ಕುಚೇಷ್ಟೆಯ ಎಳೆಯೂ ಕಂಡಿತು. ಲೇಖನದ ವಸ್ತು ಕನ್ನಡದಲ್ಲಿ ಬೈಗಳು ಮತ್ತು ಕೆಲವು ಪ್ರಯೋಗಗಳು. ಲೇಖನದಲ್ಲಿ ಅಷ್ಟೇನೂ ಒಳ್ಳೆಯ ಅಭಿರುಚಿಯನ್ನು ಪ್ರದರ್ಶಿಸದ ಕೆಲವು ನಿದರ್ಶನಗಳು ಮತ್ತು ವಾಕ್ಯಗಳು. ಲೇಖನವನ್ನು ಕಳುಹಿಸುತ್ತ ಬರೆದ ಪತ್ರದಲ್ಲಿ, "ಈ ಲೇಖನವನ್ನು ನೀವು ಪ್ರಕಟಿಸುವುದಿಲ್ಲ ಎಂದು ನನಗೆ ಗೊತ್ತು, ಧೈರ್ಯವಿದ್ದರೆ ಪ್ರಕಟಿಸಿ" ಎಂಬ ಮಾತುಗಳೂ ಇದ್ದವು. ನಾನು ಪ್ರಕಟಣೆಗೆ ಸಂಬಂಧಿಸಿದ ಗೆಳೆಯರೊಂದಿಗೆ ಚರ್ಚೆ ಮಾಡಿದೆ. ಲೇಖನವನ್ನು ಪ್ರಕಟಿಸಿದೆ. ನನ್ನ ಮುನ್ನುಡಿಯಲ್ಲಿ ಈ ಲೇಖನವನ್ನು ಪ್ರಸ್ತಾಪಿಸಿ, ಲೇಖಕರ ಮಾತುಗಳನ್ನು ಉಲ್ಲೇಖಿಸಿದೆ (ನನ್ನ ಯಾವ ಕಾಮೆಂಟ್ ಇಲ್ಲದೆ).

ಇಲ್ಲಿ ವಿವರಿಸಿರುವ ಪ್ರಸಂಗಗಳಲ್ಲಿ ನಾನು ಕಂಡುಕೊಂಡ ಪರಿಹಾರಕ್ಕಿಂತ ಉತ್ತಮವಾದ ಪರಿಹಾರಗಳು ಇತರರಿಗೆ ಹೊಳೆಯಬಹುದು. ನನ್ನ ಉದ್ದೇಶ ಸಂಪಾದಕರು ಎದುರಿಸಬಹುದಾದ ಸವಾಲುಗಳ ಸ್ವರೂಪವನ್ನು ಸೂಚಿಸುವುದಷ್ಟೆ.

ಪುಸ್ತಕ ಸಂಪಾದನೆ ವೈವಿಧ್ಯಮಯವಾದ ಆಸಕ್ತಿಯನ್ನುಂಟುಮಾಡುವ ಕಾರ್ಯ, ಹೊಣೆಗಾರಿಕೆಯ ಕಾರ್ಯ, ಹಲವೊಮ್ಮೆ ಸವಾಲುಗಳನ್ನು ಒಡ್ಡುವ ಕಾರ್ಯ. ಕೃತಿಯ ಬರಹ, ಚಿತ್ರಗಳು ಎಲ್ಲ ಸಿದ್ಧವಾಗಿ ಕೈಗೆ ಬಂದರೆ ಪುಣ್ಯ, ಆದರೆ ಲೇಖನಗಳನ್ನು ಬರೆಸಿ ಚಿತ್ರಗಳನ್ನು ಸಂಪಾದಿಸಿ ಅಚ್ಚಿಗೆ ಸಿದ್ಧಮಾಡಬೇಕಾದರೆ ಅದು ಬಹು ಶ್ರಮದಾಯಕ ಕೆಲಸ. ನಾನು ಪ್ರಧಾನ ಸಂಪಾದಕನಾಗಿ ಗುರುತರದ ಹೊಣೆಯನ್ನು ಹೊತ್ತಾಗ ಪ್ರೊ। ಎಂ.ಎಸ್. ಕೃಷ್ಣಯ್ಯ, ಡಾ। ವಿಜಯಾ ನನ್ನ ಜೊತೆಗಿದ್ದರು. ಇಂತಹ ಸಹ ಕೆಲಸಗಾರರು ದೊರೆಯುವುದೊಂದು ಪುಣ್ಯ. ನನ್ನ ಕಡೆಯ ಮಾತು; ಪುಸ್ತಕ ಸಂಪಾದನೆಯನ್ನು ಕೈಗೊಳ್ಳುವಾಗ ಶ್ರೇಷ್ಠ ಜೊತೆ ಕೆಲಸಗಾರರನ್ನು ಆರಿಸಿಕೊಳ್ಳಿ.



# ಅನುವಾದ - ಸಂಪಾದನ ಸಮಸ್ಯೆಗಳು



ಡಾ। ಪ್ರಧಾನ್ ಗುರುದತ್ತ

ಅನುವಾದಿತ ಕೃತಿಗಳ ಸಂಪಾದನ ಕಾರ್ಯ ಮೌಲಿಕ ಕೃತಿಗಳ ಸಂಪಾದನ ಕಾರ್ಯಕ್ಕಿಂತ ಭಿನ್ನವೂ, ಹೆಚ್ಚಿನ ಜವಾಬ್ದಾರಿಯಿಂದ, ಎಚ್ಚರದಿಂದ ಕೂಡಿದ ಕಾರ್ಯವಾಗಿರುತ್ತದೆ. ಮೌಲಿಕವೆನ್ನಲಾಗಿರುವ ಲೇಖನದ ಅಥವಾ ಕೃತಿಯ ಸಂಪಾದನದ ಸಂದರ್ಭದಲ್ಲಿ ಅದರ ಓದಿಸಿಕೊಳ್ಳುವಿಕೆ, ವಾಕ್ಯ ರಚನೆಯ ಸಹಜತೆ, ಬರವಣಿಗೆಯ ಪ್ರಾಮಾಣಿಕತೆ, ಆಕರಗಳ ಬಳಕೆಯಲ್ಲಿನ ನಿರ್ದುಷ್ಟತೆ ಮತ್ತು ಖಚಿತತೆ ಇವೇ ಮೊದಲಾದ ಅಂಶಗಳ ಕಡೆಗೆ ಗಮನಹರಿಸಿದರೆ ಸಾಕಾಗಬಹುದು. ಆದರೆ, ಅನುವಾದದ ಸಂದರ್ಭದಲ್ಲಿ ಸಹಜವಾದ ಓದಿಸಿಕೊಳ್ಳುವಿಕೆಯೊಂದರ ಆಧಾರದ ಮೇಲೆ, ಎಲ್ಲವೂ ಸರಿಯಾಗಿದೆ ಎಂದು ನಂಬಿ ನಡೆಯಲು ಸಾಧ್ಯವಾಗುವುದಿಲ್ಲ. ಮೌಲಿಕವೆನ್ನಲಾಗುವ ಬರೆಹಗಳ ವಿಷಯದಲ್ಲಿ ಲೇಖಕನ ಜವಾಬ್ದಾರಿ ಹೆಚ್ಚಾಗಿರುತ್ತದೆ. ಆದರೆ, ಅನುವಾದದ ವಿಷಯದಲ್ಲಿ ಅನುವಾದಕನ ಜವಾಬ್ದಾರಿಯಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚಿನ ಜವಾಬ್ದಾರಿ ಸಂಪಾದಕನದಾಗಿರುತ್ತದೆ. ಅನುವಾದಕನಿಗಿಂತಲೂ ಸಂಪಾದಕ ಹೆಚ್ಚು ಎಚ್ಚರದಿಂದ ಇರಬೇಕಾಗುತ್ತದೆ. ಅಂದರೆ, ಅನುವಾದವನ್ನು ಯಥಾರ್ಥತೆ, ಪರ್ಯಾಯಗಳ ಸೂಕ್ತತೆ, ಅನ್ವಯದ ಸಮರ್ಪಕತೆ, ಮೂಲದ ಲೋಪನ/ವಿಸ್ತಾರ, ರಚನೆಗಳ ಸಹಜತೆ, ವಿವಿಧ ವಿಷಯಗಳ ಪರಿಜ್ಞಾನ - ಇವೇ ಮೊದಲಾದ ದೃಷ್ಟಿಗಳಿಂದ ಪರಿಶೀಲಿಸುವ ಅಗತ್ಯವೂ ಇರುತ್ತದೆ. ಇಲ್ಲವಾದಲ್ಲಿ, ಮೂಲ ಲೇಖಕನಿಗೆ ಅನ್ಯಾಯ-ಅಪಚಾರಗಳನ್ನು ಎಸಗಿದಂತೆ ಆಗುತ್ತದೆ, ಕೆಲವೊಮ್ಮೆ ಅಕ್ಷಮ್ಯ ಅಪರಾಧವೂ ಆಗುವುದುಂಟು. ಹೀಗಾಗಿ, ಅನುವಾದಿತ ಬರೆಹದ ಸಂಪಾದಕ ಮೈಯೆಲ್ಲ ಕಣ್ಣಾಗಿ ಇರಬೇಕಾಗುತ್ತದೆ. ಮೂಲಭೂತವಾಗಿ ಇದೆಲ್ಲ ಅನುವಾದಕನ ಜವಾಬ್ದಾರಿಯೇ ಆದರೂ, ಸಂಪಾದಕ ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳುವುದು ಅಪೇಕ್ಷಣೀಯವಾಗುವುದಿಲ್ಲ. ಇವುಗಳನ್ನು ನಿದರ್ಶನಪೂರ್ವಕವಾಗಿ ಪರಿಶೀಲಿಸಬಹುದು.

## ಉಚ್ಚಾರಣ-ಸಂಧಿವಿಗ್ರಹ ದೋಷಗಳು

ಮೂಲ ಬರೆಹದಲ್ಲಿ ಉಚ್ಚಾರಣ ಚಿಹ್ನೆಗಳನ್ನು ಬಳಸದೆ ಇರುವುದು ಅನೇಕ ವೇಳೆ ಅನುವಾದಕರಿಗೆ ಸಮಸ್ಯೆಯಾಗಿ ಪರಿಣಮಿಸುತ್ತದೆ. ಉಭಯ ಭಾಷಾ, ಸಾಹಿತ್ಯಗಳ ಅರಿವಿಲ್ಲದೆ ಇದ್ದಾಗ, ಇದೊಂದು ಸಮಸ್ಯೆ ಎಂದೂ ಅನ್ನಿಸದೆ ಹೋಗಬಹುದು. ತನ್ನ ತಿಳಿವು ಸಮರ್ಪಕವಾಗಿದೆ ಎಂಬ ಭ್ರಮೆಗೂ ಒಳಗಾಗಬಹುದು. ಉದಾಹರಣೆಗೆ ಬಂಗಾಳೀ ಲೇಖನವೊಂದರಲ್ಲಿ **'Gana Devata'** ಎಂಬ ಶಬ್ದ ಬಂದಿತ್ತು. ಇದು ಬಂಗಾಳೀ ಭಾಷೆಯ ಪ್ರಸಿದ್ಧ ಕಾದಂಬರಿಗಳಲ್ಲಿ ಒಂದಾದ **'ಗಣ ದೇವತಾ'** ಎಂಬುದರ ಹೆಸರು ಎಂಬ ಅರಿವಿಲ್ಲದೆ ಅನುವಾದಕರು ತಮ್ಮ ಮನಸ್ಸಿಗೆ ತೋಚಿದಂತೆ ಇದನ್ನು **'ಗಾನ ದೇವತೆ'** ಎಂದು ಕಂಡರಿಸಿಬಿಟ್ಟಿದ್ದರು. ಇದರಿಂದ ಮೂಲ ಕಲ್ಪನೆಯೇ ಎಕ್ಕುಟಿಹೋಯಿತು.

ಉಚ್ಚಾರಣೆ ಸ್ಪಷ್ಟವಾಗಿದ್ದ ಸಂದರ್ಭದಲ್ಲಿ, ಭಾಷೆ, ವ್ಯಾಕರಣ ಪ್ರಕ್ರಿಯೆಗಳ ಸಮರ್ಪಕವಾದ ಅರಿವಿಲ್ಲದೆ ಹೋದ ಸಂದರ್ಭದಲ್ಲಿ ಏನೆಲ್ಲ ಅನಾಹುತಗಳಿಗೆ ಅನುವಾದಕರು ಕಾರಣರಾಗುತ್ತಾರೆ ಎಂಬುದಕ್ಕೆ ಸಾಕ್ಷಿಯಾಗಿ ಈ ಉದಾಹರಣೆಗಳನ್ನು ಗಮನಿಸಬಹುದು :

(i) ಕುವೆಂಪು ಅವರ 'ಶ್ರೀ ರಾಮಾಯನದರ್ಶನಂ' ಮಹಾಕಾವ್ಯದ ಅನುವಾದದ ಸಂದರ್ಭದಲ್ಲಿ ಕ್ರೌಂಚವಧೆಯ ಪ್ರಸಂಗದಲ್ಲಿ ವ್ಯಾಧ ಪ್ರಯೋಗಿಸಿದ ಬಾಣದಿಂದ 'ಜೀರ್ಕೋವಿ'ಯಂತೆ ರಕ್ತ ಚಿಮ್ಮಿತು ಎಂಬ ವರ್ಣನೆಯಲ್ಲಿ ಬಂದಿರುವ ಈ ಶಬ್ದ, 'ಪಿಚಕಾರಿ'ಯಂತೆ ರಕ್ತವನ್ನು ಚಿಮ್ಮಿಸಿತು ಎಂಬ ಅರ್ಥವನ್ನು ಗ್ರಹಿಸಲಾರದೆ, 'ಕೋವಿ' ಎಂಬ ಶಬ್ದದ ಆಧಾರದ ಮೇಲೆ ಇದನ್ನು **bullet gush** ಎಂದು ಅನುವಾದಿಸಿ, ಬೇಡನ ಕೈಗೆ ಬಂದೂಕವನ್ನು ಕೊಡುವ ಕೆಲಸವನ್ನು ಅನುವಾದಕರು ಮಾಡಿಬಿಟ್ಟಿದ್ದಾರೆ.

(ii) ಇದೇ ರೀತಿ, ಈ ಕಾವ್ಯದಲ್ಲಿಯೇ ಬಂದಿರುವ **'ಸದ್ದಿಲಿ ಇರುಳ್'** ಅಂದರೆ ಸದ್ದು ಇಲ್ಲದೆ ಇರುವ ನಿಶ್ಶಬ್ದವಾಗಿರುವ ರಾತ್ರಿ ಎಂಬ ಅರ್ಥವನ್ನು ಗ್ರಹಿಸಲಾರದೆ ಹೋದ ಹೊಸಗನ್ನಡ ವ್ಯಾಕರಣ ಪ್ರಕ್ರಿಯೆಯ ಅರಿವಿಲ್ಲದಿರುವ ಅನುವಾದಕರು, ಇದನ್ನು ಇಲಿಗಳ ಹಾವಳಿಯಿಂದ ಕೂಡಿದ ರಾತ್ರಿ ಎಂದು ಅರ್ಥೈಸಿಕೊಂಡು **'Ratsome night'** (**'troublesome night'** ಎಂಬಂತೆ) ಎಂದು ಅನುವಾದಿಸಿದ್ದು ಉಚಿಟು.

(iii) ಈ ಕಾವ್ಯದಲ್ಲಿಯೇ ಬಂದಿರುವ **'ಸುಟ್ಟುರೆ'** (ಅಂದರೆ 'ಸುಂಟರಗಾಳಿ') ಎಂಬ ಶಬ್ದವನ್ನು **'ಸುಟ್ಟ+ಉರೆ'** ಎಂಬುದಾಗಿ ಬಿಡಿಸಿಕೊಂಡು 'ತಪ್ತ ಭೂಮಿ' ಎಂದು ಹಿಂದಿಗೆ ಅನುವಾದಿಸಿಕೊಂಡಿರುವುದೂ ಉಂಟು.

(iv) ಇದೇ ಕಾವ್ಯದಲ್ಲಿ ಕೈಕೆಯ ದಾರುಣ ಜೀವನವನ್ನು ವರ್ಣಿಸುವ ಸಂದರ್ಭದಲ್ಲಿ ಬಂದಿರುವ **'ಶಿವಾಶಿವ ಶ್ರೀಕಂಠ ಶಕ್ತಿ'** (ಶಿವವನ್ನೂ, ಅಶಿವವನ್ನೂ ಉಂಟುಮಾಡಬಲ್ಲಂಥ ಪರಶಿವನ ಶಕ್ತಿ ಎಂಬುದನ್ನು ಗ್ರಹಿಸಲಾರದೆ ಹೋಗಿ) '**ಶಿವಾ ಕೀ ಕಂಠ ಶಕ್ತಿ** ತುಮ್ ಹೋ' ಎಂದು ಅನುವಾದಿಸಿ, ಗಿರಿಜೆಯ ಗಂಟಲಿನ ಅಬ್ಬರವನ್ನಾಗಿಸಿರುವುದೂ ಉಂಟು.

(v) ಅಂಬೇಡ್ಕರ್ ಅವರ ಕೃತಿಯ ಅನುವಾದದ ಸಂದರ್ಭದಲ್ಲಿ 'ನಿರುಕ್ತ' ಎಂಬ ವ್ಯಾಕರಣ ಗ್ರಂಥದ (ಶಬ್ದಗಳ ವ್ಯುತ್ಪತ್ತಿಯನ್ನು ಕುರಿತು ಹೇಳುವ ಗ್ರಂಥ) ಕರ್ತೃವಿನ ಹೆಸರನ್ನು '**Yaska**' ಎಂದು ಸರಿಯಾಗಿಯೇ ಮೂಲದಲ್ಲಿ ಕಾಣಿಸಿದ್ದಾರಾದರೂ (ಉಚ್ಚಾರಣ ಚಿಹ್ನೆ ಇಲ್ಲವೆಂಬುದು ನಿಜ !) ಇದನ್ನು '**ಯಕ್ಷ**' ಎಂದು ಲಿಪ್ಯಂತರಿಸಿಕೊಂಡಿದ್ದಾರೆ. ಹಾಗೆಯೇ ಅಚ್ಚಾಗಿಯೂ ಇದೆ ('ಯಾಸ್ಕ' ಎಂಬುದಕ್ಕೆ ಬದಲಾಗಿ !)

(vi) ಪುರಾಣಗಳ ಉಲ್ಲೇಖವನ್ನು ಕೊಡುತ್ತ, ಅಂಬೇಡ್ಕರ್ ಅವರು '**Matsyapurana**'ವನ್ನು ಹೆಸರಿಸಿದ್ದಾರೆ. ಅನುವಾದಕರು ಇದನ್ನು '**ಮತ್ಸ್ಯಪುರುಷ**'ನನ್ನಾಗಿಸಿ ಬಿಟ್ಟಿರುವುದೂ ಉಂಟು. ಅಂಕಿತನಾಮಗಳಿಗೆ ಸಂಬಂಧಿಸಿದಂತೆಯೂ, ಇಂಥ ಹತ್ತಾರು ಹಾವಳಿಗಳಾಗಿಬಿಟ್ಟಿದೆ.

(vii) ತುಲಸೀದಾಸರ 'ಶ್ರೀರಾಮಚರಿತ ಮಾನಸ'ದ ಸಂದರ್ಭದಲ್ಲಿ 'ತಡಾಗ' (=ತಟಾಕ) ಎಂಬುದನ್ನು 'ತಾಟಕ' ಎಂದು ಅನುವಾದಿಸಿಕೊಂಡಿರುವ ಅನುವಾದಕರು, 'ಮದನ' ಎಂಬ ಶಬ್ದ ಅಪಭ್ರಂಶದಲ್ಲಿ 'ಮಯನ' ಎಂದಾಗಿರುತ್ತದೆ ಎಂಬುದನ್ನೂ ಗಮನಿಸದೆ 'ಮಯನ ಮರ್ದನ' ಎಂದು ಅನುವಾದಿಸಿಕೊಂಡು ಹೊಸ ಪುರಾಣವನ್ನೇ ಸೃಷ್ಟಿಸಿಬಿಟ್ಟಿದ್ದಾರೆ. ('ಮದನನ್ನು ನಿಗ್ರಹಿಸಿದ ಶಿವ' ಎಂಬುದಕ್ಕೆ ಬದಲಾಗಿ)

### ಅಸಮರ್ಪಕ ಸಮೀಕರಣ

(i) ಅನುವಾದಕರು ಕೆಲವೊಮ್ಮೆ ಶಬ್ದಗಳ ಸರಿಯಾದ ಅರ್ಥವನ್ನು ಕಂಡುಕೊಳ್ಳುವ ಪ್ರಯತ್ನ ಮಾಡದೆ, ತಮಗೆ ಗೊತ್ತಿದೆ ಎಂದು ಇನ್ನಾವುದೋ ಶಬ್ದದೊಂದಿಗೆ ಸಮೀಕರಿಸಿಕೊಂಡು ವಿಚಿತ್ರ–ವಿಕೃತಾರ್ಥವನ್ನು ಕೊಟ್ಟು ಅಪಹಾಸ್ಯಕ್ಕೆ ನಿದರ್ಶನವನ್ನು ಒದಗಿಸಿರುವುದೂ ಉಂಟು. ಉದಾಹರಣೆಗೆ ಅಪ್ಪಾದೊರೈ ಅವರ 'Substance of Politics'ನ ವಾಕ್ಯವೊಂದರ ಅನುವಾದದ ಸಂದರ್ಭದಲ್ಲಿ 'aggregation' ಶಬ್ದವನ್ನು 'agression' ಎಂದು ಭಾವಿಸಿ, ಅನುವಾದಿಸಿಕೊಂಡಿರುವುದೂ ಉಂಟು. ಆ ವಾಕ್ಯ ಹೀಗಿದೆ:

"Aggregation of individuals constitutes a family; aggregation of families constitutes a community; aggregation of communities constitutes a state....."

ಇದನ್ನು ಅನುವಾದಿಸಿಕೊಂಡಿರುವುದು ಹೀಗೆ:

**"ವ್ಯಕ್ತಿಗಳು ದಾಳಿ ಮಾಡಿದರೆ ಕುಟುಂಬಗಳಾಗುತ್ತವೆ. ಕುಟುಂಬಗಳು ದಾಳಿ ಮಾಡಿದರೆ ಸಮುದಾಯಗಳಾಗುತ್ತವೆ; ಸಮುದಾಯಗಳು ದಾಳಿ ಮಾಡಿದರೆ ರಾಜ್ಯಗಳಾಗುತ್ತವೆ."**

ಇನ್ನೊಮ್ಮೆ ಈ ವಾಕ್ಯವನ್ನೇ ಓದಿದರೆ ಅದರ 'ಅಬದ್ಧತೆ' ಅನುವಾದಕರಿಗೆ ಅರಿವಾಗಬಹುದಿತ್ತು. ಹಾಗೆ ಮಾಡದೆ, ಈ ವಿಕೃತಿಗೆ ಎಡೆಮಾಡಿಕೊಟ್ಟಿದ್ದಾರೆ.

(ii) ಈ ಬಗೆಯ ಸಮೀಕರಣದಿಂದ ಆಗಬಹುದಾದ ಅನರ್ಥಕ್ಕೆ ಇನ್ನೊಂದು ಉದಾಹರಣೆಯನ್ನು ಗಮನಿಸಬಹುದು. 'ಮಹಾಭಾರತ'ದಲ್ಲಿ ತಿಳಿಯಾದ ಕೊಳವೊಂದನ್ನು ವರ್ಣಿಸುವಾಗ ಈ ಮಾತು ಬಂದಿದೆ :
**"ಸೂಪತೀರ್ಥಮಕಲುಷಾಂ...."** (೩.೨೯)
ಇದನ್ನು ಒಬ್ಬ ಪ್ರಸಿದ್ಧ ಸಂಸ್ಕೃತ ವಿದ್ವಾಂಸರೇ ತಪ್ಪಾಗಿ,
"ಅದರಲ್ಲಿ **ಪವಿತ್ರತೀರ್ಥ**ಗಳು ಬಂದುಕೂಡಿದ್ದುವು"
–ಎಂದು ಅನುವಾದಿಸಿಕೊಂಡಿದ್ದಾರೆ. ಕೊಳದಲ್ಲಿ **"ಪವಿತ್ರ ತೀರ್ಥಗಳು ಬಂದು ಕೂಡಿದ್ದುವು"** ಎಂಬ ಅಸಂಭವನೀಯ ಕಲ್ಪನೆಗೆ ಎಡೆಮಾಡಿಕೊಟ್ಟಿದ್ದಾರೆ. ವಾಸ್ತವವಾಗಿ 'ಸೂಪ ತೀರ್ಥ' ಎಂಬುದಕ್ಕೆ **'ಮೆಟ್ಟಿಲುಗಳಿಂದ ಕೂಡಿದ ಕೊಳ'** ಎಂದು ಅರ್ಥ; ಕೋಶವನ್ನು ನೋಡಿದ್ದರೆ, "Stairs for landing or for descent into a river, bathing place" ಎಂಬ ಅರ್ಥ ಇದೆ ಎಂಬುದು ಅರಿವಾಗುತ್ತಿತ್ತು. (ಮೋನಿಯರ್ ವಿಲಿಯಮ್ಸ್, ಪು. ೪೪೯)

(iii) ಶಬ್ದಗಳ ಉಚ್ಚಾರಣೆ ಒಂದೇ ಆಗಿದ್ದರೂ ಅರ್ಥ ಬೇರೆಯಾಗಿರುವ ಸಂದರ್ಭಗಳೂ ಇರುತ್ತವೆ. ಉದಾಹರಣೆಗೆ, ಸಂಸ್ಕೃತ ಮೂಲದಿಂದಲೇ ಬಂದಿದ್ದರೂ ಬೇರೆ ಬೇರೆ ಅರ್ಥಗಳು ಬೆಳೆದು ನಿಂತಿರುವುದೂ ಉಂಟು. ಈ ಭಿನ್ನಾರ್ಥಕ ಸಂವೇದನೆ ಇಲ್ಲದ ಅನುವಾದಕರು ಇಂಥ ತಪ್ಪುಗಳನ್ನು ಎಸಗಿರುವ ವಿಚಾರದಲ್ಲಿ ಅನುವಾದ ಸಂಪಾದಕರು ಎಚ್ಚರದಿಂದ ಇರಬೇಕಾಗುತ್ತದೆ. ಉದಾಹರಣೆಗೆ ಈ ಕೆಲವು ಶಬ್ದಗಳನ್ನು ಗಮನಿಸಬಹುದು :

| **ಸಂಸ್ಕೃತ ಮೂಲದ ಶಬ್ದ** | **ಕನ್ನಡದಲ್ಲಿ ಅರ್ಥ** | **ಹಿಂದಿಯಲ್ಲಿ ಅರ್ಥ** |
|---|---|---|
| ಪ್ರಬಂಧ | Essay(ಬರೆಹದ ಒಂದು ಪ್ರಕಾರ) | Arrangement(ಏರ್ಪಾಡು) |
| ಉಪನ್ಯಾಸ | ಭಾಷಣ (Lecture) | ಕಾದಂಬರಿ (Novel) |
| ಆಹ್ವಾನ | ಕರೆ (Invitation) | ಸವಾಲು (Challenge) |
| ಧ್ಯಾನ | ಧ್ಯಾನ ಮಾಡುವುದು (Meditation) | ಗಮನ (Attention) |
| ಸ್ವರ್ಗೀಯ | ಸ್ವರ್ಗದಂತಿರುವ (Heavenly) | ದಿವಂಗತ (Deceased) |
| ಸಂಪನ್ನ | ಕೂಡಿರುವುದು (Harbouning) | ನಡೆದಿರುವುದು (Occured) |
| ದೇವಿ | ದೇವತೆ; ಪೂಜಾರ್ಹಳು (Deity) | ಮಹಿಳೆ (Woman) |

ಯೂರೋಪಿಯನ್ ಭಾಷೆಗಳಲ್ಲಿಯೂ ಇಂಥ ಸಂದರ್ಭಗಳು ಕಾಣದೊರೆಯುತ್ತವೆ. ಉದಾಹರಣೆಗೆ, ಗ್ರೀಕ್ ಭಾಷೆಯಲ್ಲಿ 'Heart' ಶಬ್ದಕ್ಕೆ 'Liver' (ಪಿತ್ತಜನಕಾಂಗ) ಎಂಬ ಅರ್ಥ ಇದ್ದರೆ, ಇಂಗ್ಲಿಷ್‌ನಲ್ಲಿ 'ಹೃದಯ' ಎಂಬ ಅರ್ಥವಿದೆ. ಅಂತೆಯೇ 'alcool' ಶಬ್ದಕ್ಕೆ ಫ್ರೆಂಚ್‌ನಲ್ಲಿ 'spirit' ಎಂಬ ಅರ್ಥವಿದ್ದರೆ ಇಂಗ್ಲಿಷ್‌ನಲ್ಲಿ 'alcohol' ಎಂಬ ಅರ್ಥವೇ ಇದೆ. ಇದನ್ನು ಅವಸರದಲ್ಲಿ ಗಮನಿಸದೆ ಹೋದ B B C (British Broadcasting Corporation) ಪೇಚಿಗೆ ಸಿಕ್ಕಿಕೊಂಡ ಸಂದರ್ಭ ಸುಪ್ರಸಿದ್ಧವಾಗಿದೆ. ನಮ್ಮಲ್ಲಿ ಇಂಥ ಪ್ರಸಂಗಗಳು ಆಗುತ್ತಲೇ ಇವೆ. Constitutional amendment ಬಗ್ಗೆ ವರದಿ ಮಾಡಿದ ಸಂದರ್ಭದಲ್ಲಿ amendmentಗೆ ಹಿಂದಿಯಲ್ಲಿ ಬಳಸಿದ 'ಸಂಶೋಧನ' ಶಬ್ದವನ್ನೇ ಯಥಾವತ್ತಾಗಿ ಕನ್ನಡದಲ್ಲಿ ಅಳವಡಿಸಿಕೊಂಡು "ಸಂವಿಧಾನದಲ್ಲಿ ಸಂಶೋಧನೆಯನ್ನು ಮಾಡಲಾಗಿದೆ" ಎಂದು ವರದಿ ಮಾಡಲಾಗಿತ್ತು. ಇತ್ತೀಚೆಗೆ, ಅನುವಾದಕರೊಬ್ಬರು "ಗಾಂಧೀಜೀ ಕೋ ಗರ್ವ ಥಾ...." ಎಂಬುದನ್ನು "ಗಾಂಧೀಜಿಗೆ ಗರ್ವ ಇತ್ತು" ಎಂದು ಅನುವಾದಿಸಿದ್ದರು. ಹಿಂದಿಯಲ್ಲಿ 'ಗರ್ವ' ಶಬ್ದಕ್ಕೆ 'ಅಭಿಮಾನ' ಎಂಬ ಅರ್ಥವಿದೆ; ಆದರೆ ಕನ್ನಡದಲ್ಲಿ ಇದಕ್ಕೆ 'ಅಹಂಕಾರ' ಎಂಬ ಅರ್ಥವಿದೆ. ಹೀಗಾಗಿ ಈ ಸಮಸ್ಯೆ.

(iv) ಪಾರಸ್ಪರಿಕ ಸಂಬಂಧದಿಂದಾಗಿ ಕೆಲವು ಶಬ್ದಗಳು ಭಾಷೆಗಳಲ್ಲಿ ಬೆರೆತುಹೋಗಿರುತ್ತವೆಯಾದರೂ, ವಿವೇಚನೆ ಇಲ್ಲದೆ ಶಬ್ದಗಳನ್ನು ಬಳಸಿಬಿಡುವುದು ಅಪೇಕ್ಷಣೀಯವಲ್ಲ. "ಗಾಂಧೀಜಿ **ಶಹೀದಿಯಾದರು**" ಎಂಬ ವಾಕ್ಯ

ಅರ್ಥವಾಗುವುದು ಹೇಗೆ? ಕನ್ನಡದಲ್ಲಿ "ಹುತಾತ್ಮ" ಎಂಬ ಶಬ್ದ ಬಳಕೆಯಲ್ಲಿದೆಯಲ್ಲವೆ. ಹೀಗಾಗಿ, ಸಂಪಾದಕನು ಈ ಬಗೆಯ ಕ್ಲೇಶಗಳನ್ನೂ ನಿವಾರಿಸಿಕೊಳ್ಳಬೇಕಾಗುತ್ತದೆ.

## ನುಡಿಗಟ್ಟುಗಳ ವಿಚಾರ

ಅನೇಕ ವೇಳೆ ಅನುವಾದಕರು ನುಡಿಗಟ್ಟುಗಳ ಸಮರ್ಪಕವಾದ ಅರ್ಥವನ್ನು ಗ್ರಹಿಸದೆ, ಅನರ್ಥಕ್ಕೆ ಎಡೆಗೊಟ್ಟಿರುವುದು ಉಂಟು. ಉದಾಹರಣೆಗೆ 'for good' ಎಂಬುದನ್ನು 'ಒಳ್ಳೆಯದಕ್ಕಾಗಿ' ಎಂದೂ 'round the corner' ಎಂಬುದನ್ನು 'ಮೂಲೆಯ ಸುತ್ತ' ಎಂದೂ, 'ಹವಾ ಸೇ ಬಾತೇಂ ಕರ್‌ನಾ' ಎಂಬುದನ್ನೂ 'ಗಾಳಿಯ ಕೂಡ ಮಾತನಾಡಹತ್ತಿದವು' ಎಂದೂ, 'ದೂಧ್ ಪೀತೀ ಬಚ್ಚೀ' ಎಂಬುದನ್ನು 'ಮೊಲೆ ತಿನ್ನುವ ಮಗು' ಎಂದೂ ಅನುವಾದಿಸಿದ್ದರೆ, ಸಂಪಾದಕ ಅವನ್ನು 'ಶಾಶ್ವತವಾಗಿ', 'ಖಾಯಮ್ಮಾಗಿ', 'ಸನ್ನಿಹಿತ', 'ವೇಗವಾಗಿ ಓಡು', 'ಎಳೆಯ ಮಗು'/'ಮುಗ್ಧ ಶಿಶು' ಎಂದೆಲ್ಲ ತಿದ್ದುಪಡಿಮಾಡದೆ ಸುಮ್ಮನಿರುವಂತಿಲ್ಲ.

ಇಂಥ ತಪ್ಪುಗಳಿಗೆ ಸಂಬಂಧಿಸಿದಂತೆ ಅನುವಾದಕರ ಅರಿವಿನ ಕೊರತೆಯ ಬಗ್ಗೆ ಕನಿಕರ ತೋರುವುದು ಮಾತ್ರವಲ್ಲ, ಕೋಶಗಳನ್ನು ನೋಡಲು ಹೋಗದ ಸೋಮಾರಿತನ ಅಥವಾ ತನ್ನ ತಿಳಿವಳಿಕೆಯೇ ಪ್ರಶ್ನಾತೀತವಾದುದೆಂಬ ಧಾರ್ಷ್ಟ್ಯದ ಬಗ್ಗೆ ಅಸಹನೆಯನ್ನೂ ಸಂಪಾದಕರು ತೋರುವಂತಾಗುತ್ತದೆ. ಈ ಸಂವೇದನೆ ಇಲ್ಲದೆ ಹೋದರೆ 'idiomatic' ಭಾಷೆ 'idiotic' ಭಾಷೆಯಾಗಿಬಿಡುತ್ತದೆ.

## ಸೃಜನಾತ್ಮಕ ತರ್ಕಕ್ಕೆ ಭಂಗ ಒದಗುವುದು

ಓದಿನ ಸಂದರ್ಭದಲ್ಲಿ ವಿಚಾರಧಾರೆಗೆ ಇದ್ದಕ್ಕಿದ್ದಂತೆ ಭಂಗಒದಗಿದಾಗ, ಮೂಲದ ಕೆಲವು ಭಾಗಗಳು ಶಬ್ದಗಳಿಂದ ಹಿಡಿದು ಪ್ಯಾರಾಗಳವರೆಗೆ ಬಿಟ್ಟುಹೋಗಿರುವ ಸಾಧ್ಯತೆಯೂ ಇರುತ್ತದೆ. ಹೀಗಾಗಿ, ಅಂಥ ಭಾಗಗಳನ್ನು ಅನುವಾದಿಸಿ ಸೇರಿಸಲು ಕ್ರಮಕೈಗೊಳ್ಳಬೇಕಾಗುತ್ತದೆ. ಸುಪ್ರಸಿದ್ಧ ಭಾರತೀಯ ಕಾದಂಬರಿಕಾರರೊಬ್ಬರ ಕಾದಂಬರಿಯ ಅನುವಾದದ ಸಂಪಾದನ ಕಾರ್ಯದಲ್ಲಿ ಸೂಕ್ಷ್ಮ ಸಂವೇದನೆಯ ಸಂಪಾದಕಿಯೊಬ್ಬರು ನನ್ನೊಂದಿಗೆ ದೂರವಾಣಿಯಲ್ಲಿ ಚರ್ಚಿಸಿದಾಗ, ಮೂಲದ ಕೆಲವು ಅಂಶಗಳು ಬಿಟ್ಟುಹೋಗಿರುವಂತೆ ತೋರುವುದಾಗಿಯೂ, ಆ ಭಾಗಗಳನ್ನು ಪರಿಶೀಲಿಸಿ ತಿಳಿಸಬೇಕೆಂಬುದಾಗಿಯೂ ನನ್ನನ್ನು ಕೋರಿದರು. ಆ ಭಾಗಗಳಲ್ಲಿ ಲೋಪವಾಗಿರುವುದು ನಿಜವಾಗಿತ್ತು. ಮೂಲ ಭಾಷೆ ಗೊತ್ತಿಲ್ಲದಿದ್ದರೂ, ಇದನ್ನು ಹೇಗೆ ಪತ್ತೆಹಚ್ಚಲು ಸಾಧ್ಯವಾಯಿತೆಂದು ನಾನು ಪ್ರಶ್ನಿಸಿದಾಗ, ಆಕೆ ಹೇಳಿದರು; "ನೋಡಿ, ಸೃಜನಶೀಲ ಬರೆಹದಲ್ಲಿ ಒಂದು ಬಗೆಯ ಸೃಜನಶೀಲ ತರ್ಕ (Creative logic) ಇರುತ್ತದೆ. ಅದಕ್ಕೆ ಭಂಗ ಒದಗಿದಲ್ಲಿ, ಆ ಹರಿವಿಗೆ ವಿಚ್ಛಿತ್ತಿ (break) ಉಂಟಾದಲ್ಲಿ ಹಿಂದುಮುಂದಿನ ವಾಕ್ಯಗಳಿಗೆ ಸುಸಂಬದ್ಧ ಜೋಡಣೆ (natural link) ಇಲ್ಲದೆ ಇದ್ದಲ್ಲಿ ಇಂಥದೇನಾದರೂ ಆಗಿರಬೇಕೆಂದು ಊಹಿಸಬಹುದು." ಆಕೆಯ ಮಾತು ನಿಜವಾಗಿತ್ತು. ಆಕೆ ಎತ್ತಿ ತೋರಿಸಿದ ಪ್ರಸಂಗಗಳಲ್ಲಿ ವಿಭಿನ್ನ ಪ್ರಮಾಣದ ಲೋಪಗಳು ಉಂಟಾಗಿದ್ದುವು. ಇಂಥ ಒಂದೆರಡು ನಿದರ್ಶನಗಳನ್ನು ನೋಡಬಹುದು.

(i) ಡಾ. ಎಸ್. ರಾಧಾಕೃಷ್ಣನ್ ಅವರ ಪ್ರಸಿದ್ಧ ಗ್ರಂಥವೊಂದರ ಅನುವಾದವನ್ನು ಪರಿಶೀಲಿಸುತ್ತಿದ್ದಾಗ, ಇಂಥ ಒಂದು ಮಾತು ನನಗೆ ಎದುರಾಯಿತು:

"ಶೂದ್ರರೊಂದಿಗೆ ಬೆರೆತ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಹೆಂಗಸರಿಗೆ ಮಕ್ಕಳಾದಲ್ಲಿ ಮಾತ್ರ ಪ್ರಾಯಶ್ಚಿತ್ತ ಬೇಕೆಂದು ವಸಿಷ್ಠನು ಅಭಿಪ್ರಾಯಪಡುತ್ತಾನೆ."

ಇದರ ಅಸಂಬದ್ಧತೆ – ಮಕ್ಕಳಾಗದೆ ಇದ್ದಲ್ಲಿ, ಮಕ್ಕಳಾಗುವವರೆಗೂ ವ್ಯಭಿಚಾರವನ್ನು ಮುಂದುವರಿಸಬೇಕೆ ಎಂಬ ತರ್ಕ ಇಲ್ಲಿ ಎದ್ದು ಕಾಣುತ್ತದೆ. ಮೂಲವನ್ನು ಪರಿಶೀಲಿಸಿದಾಗ, ಒಂದು ಮುಖ್ಯ ಶಬ್ದ ಬಿಟ್ಟುಹೋಗಿದ್ದುದು ಕಂಡು ಬಂದಿತು. ಆ ಭಾಗ ಹೀಗಿತ್ತು;

"Vasistha says that, "wives of Brahmins, Kṣatriyas and Vaisyas, who commit adultery with a Sudra, may be purified by a penance if **no** child is born, but not otherwise."

ಅನುವಾದ ಯಥಾವತ್ತಾಗಿಲ್ಲದೆ ಇರುವುದರ ಜೊತೆಗೆ, ಇಲ್ಲಿ 'no' ಶಬ್ದವನ್ನು ಗಮನಿಸದೆ ಹೋಗಿರುವುದರಿಂದ ಆಗಿರುವ ಅಪಚಾರ ಎದ್ದುಕಾಣುತ್ತದೆ.

(ii) ಇನ್ನೊಂದು ಸಂದರ್ಭದಲ್ಲಿ ಅನುವಾದ **ಜಾಳಾಗಿದ್ದುದನ್ನು**, ಕಂಡಾಗ ಮೂಲದ ಒಂದು ವಾಕ್ಯಾಂಶವೇ ಬಿಟ್ಟುಹೋಗಿತ್ತು; ಭಾಷಾಂತರ ಹೀಗಿತ್ತು;

"ರಾಕ್ಷಸ ಮಾಯೆಯ ವಿನಾಶಕ್ಕಾಗಿ ಹುಟ್ಟಿದ ದೇವಮಾಯೆ ಸೀತಾದೇವಿ ಲಂಕೆಯಲ್ಲಿ ರಾಮನ ಹಂಬಲದಲ್ಲಿ ಪಡುತ್ತಿರುವ ನೋವನ್ನು ಕಂಡು ಬಂದ ಹನುಮಂತನು, **ರಾಮನಿಗೆ ಅದನ್ನೆಲ್ಲ ವಿಶದವಾಗಿ ವಿವರಿಸುತ್ತಾನೆ.**"
ಮೂಲ ಹೀಗಿತ್ತು;

"Hanuman, who met Sita, who is said to be really devamaya born to bring about the defeat of raksasamaya, tells Rama that she is paining away in Lanka, and when he met her she was resolved on death."

ಸೀತೆ ಸಾಯಲು ನಿಶ್ಚಯಿಸಿದ್ದಳೆಂಬ ಮಾತನ್ನೇ ಬಿಟ್ಟುಬಿಟ್ಟಿರುವುದು, ಅಡಿಟಿಪ್ಪಣಿಯಾಗಿ 'ಮರ್ತವ್ಯೇತಿ ಕೃತನಿಶ್ಚಿಯಾ' ಎಂಬ ಮಾತನ್ನು ಗಮನಿಸದೆ ಇರುವುದೂ ಕಂಡು ಬಂದಿತು. ಅನುವಾದದ ಉಳಿದ ದೋಷಗಳ ಬಗ್ಗೆ ಇಲ್ಲಿ ಚರ್ಚೆ ಬೇಕಿಲ್ಲ.

(iii) ಹೀಗೆಯೇ **ಸೇರ್ಪಡೆ**ಯಾಗಿರುವ ಭಾಗಗಳೂ ಸಂಪಾದಕರ ಸೂಕ್ಷ್ಮ ಸಂವೇದನೆಗೆ ಗೋಚರಿಸಬಹುದು. ಅಂಥ ಒಂದು ಪ್ರಸಂಗ ಹೀಗಿದೆ:

"ಮದುವೆ ಎಂದರೆ ನಮ್ಮಲ್ಲನೇಕರಿಗೆ ಹೆಣ್ಣು ಗಂಡುಗಳನ್ನು ಜೊತೆಗೂಡಿಸಿ, ವಂಶೋತ್ಪತ್ತಿಗಾಗಿ ಪರಸ್ಪರ ಸಹಿಸಿಕೊಂಡು **ಹೇಗೋ ಜೀವನವನ್ನು ಸಾಗಿಸುವ ಒಂದು ಕ್ರಮ ಎಂಬಂತಾಗಿದೆ.** ದಾಂಪತ್ಯದ ಆದರ್ಶಗಳನ್ನು ಪರಿಪೂರ್ಣವಾಗಿ ಸಾಧಿಸಿದಂತಹ ಕೆಲವು ಸಂಸಾರಗಳು, ಅಪರೂಪಕ್ಕೊಮ್ಮೆ ಕಾಣಬರುತ್ತವೆ. ಅಂತಹವರು ಬಾಳಪರ್ಯಂತವೂ ಜೊತೆಗೂಡಿ **ಮುಂದಿನ ಜನಾಂಗಕ್ಕೆ ಆದರ್ಶದ ಪ್ರೇರಕ ಶಕ್ತಿ**ಗಳಂತಿರುತ್ತಾರೆ.

ಮೂಲವನ್ನು ನೋಡಿದರೆ,
"For most of us **marriage is only a paining**, a **resolve to tolerate each other for breeding purposes**, a determination to live together **on the principle of give and take.** But once in a way a man and a woman whose lives are in complete accord; and such people live together forever."

ಮೂಲವನ್ನು ಬದಿಗರಿಸಿ, ತಮಗೆ ತೋಚಿದಂತೆ ಬರೆಯುವ ಕ್ರಮವನ್ನು ಅನುವಾದಕರು ಅನುಸರಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಸಂಪಾದನ ಕಾರ್ಯ ಸರಿಯಾಗಿ ನಡೆಯದೆ ಇದ್ದಾಗ, ಇಂಥವೆಲ್ಲ ಉಳಿದುಕೊಂಡುಬಿಡುತ್ತದೆ.

(iv) ಓದಿನ ಸಂದರ್ಭದಲ್ಲಿಯೇ ಅಸಂಬದ್ಧತೆ ಗೋಚರಿಸುವ ಇನ್ನೊಂದು ಉದಾಹರಣೆಯನ್ನು ನೋಡಿ:

"ಪ್ರಾಚೀನ ಗ್ರೀಕನು **ತನ್ನ ಹೆಂಡತಿಯ ಪ್ರಸವ ಕಾಲದಲ್ಲಿ ಅಪೋಲೋ ಮೂರ್ತಿಯೊಂದನ್ನು ಅವನ ಹಾಸಿಗೆಯ ಬಳಿ ಇರಿಸುತ್ತಿದ್ದ**–ಹುಟ್ಟುವ ತನ್ನ ಮಗ ಆ ಸುಂದರ ದೇವತೆಯನ್ನು ಹೋಲಬೇಕೆಂಬಾಶೆಯಿಂದ."

ಮೂಲದಲ್ಲಿ ಇರುವುದಾದರೂ ಏನು?

"An ancient greek would put a statue of Apollo beside his wife's bed when she was going to have a baby. He did so, of course, so that his son would resemble the handsome god."

ವಿವೇಚನೆಯನ್ನು ಕಾಡಿಗಟ್ಟಿದರೆ ಮಾತ್ರ ಹೀಗಾಗಬಹುದೇನೋ.

ಇಂಥ ಲೋಪ-ದೋಷಗಳಿಂದಾಗಿ **ಐತಿಹಾಸಿಕ ಸತ್ಯಕ್ಕೆ ಅಪಚಾರವಾಗಿಬಿಡುವ ಅಪಾಯವೂ** ಇರುತ್ತದೆ. ಇತರ ವಿಷಯಗಳ ಪರಿಜ್ಞಾನ ಇಲ್ಲದೆ ಹೋದರೆ, ಇಂಥ ಅಪಚಾರ ಗಮನಕ್ಕೆ ಬಾರದೆಯೂ ಹೋಗಬಹುದು. ಅಂಥ ಒಂದು ಉದಾಹರಣೆ ಇಲ್ಲಿದೆ:

"ತಾನು ತಯಾರಿಸಿದ ಅನಿಲವು ಹವೆಯಲ್ಲಿ ಇದೆ ಎಂಬುದು ಪ್ರೀಸ್ಲೆಗೆ ಅರಿವಾಗಲಿಲ್ಲ. ಕೆಲವು ವರ್ಷ ಗತಿಸಿದ ನಂತರ ಮಾತ್ರ ಮತ್ತು ಈ ಅನಿಲದ ಗುಣಗಳ ಆಳವಾದ ಅಭ್ಯಾಸ ಮಾಡಿದ ಅನಂತರ ಇವನು ಇದೊಂದು ಹವೆಯ ಘಟಕದೆಂದು ನಿರ್ಣಯಿಸಿ, ಅದಕ್ಕೆ 'ಆಕ್ಸಿಜನ್' ಎಂದು ಹೆಸರುಕೊಟ್ಟನು."

ಮೂಲ ಹೀಗಿದೆ:

"However, Priestley did not know that the gas he had obtained was contained in the air. Only several years later, having made a thorough study of the properties of this gas, **Lavuisier established** that this was a component part of air, and gave it the name oxygen."

ಇದು ಮೂಲ ಲೇಖಕನಿಗೆ, ವಿದ್ಯಾರ್ಥಿಗಳಿಗೆ, ವಿಜ್ಞಾನದ ಇತಿಹಾಸಕ್ಕೆ ಮಾಡಿರುವ ಅಪಚಾರ. ಲೆವೋಸಿಯೇನ ಸಾಧನೆಯನ್ನೇ ಅನಾಮತ್ತಾಗಿ ನುಂಗಿಹಾಕಿ ಬಿಟ್ಟಿರುವ ಸಂದರ್ಭ ಇದು.

ಅತ್ಯಲ್ಪ ನಿರ್ಲಕ್ಷ್ಯ ಅಥವಾ ಕಣ್ತಪ್ಪು ಕೂಡ ಪರಿಕಲ್ಪನೆಯ ಬದಲಾವಣೆಗೆ ಕಾರಣವಾಗಬಹುದು; ವಸ್ತು ಸಂಗತಿಯನ್ನೇ ವಿರೂಪಗೊಳಿಸಬಹುದು. ಇಂಥ ಒಂದು ಉದಾಹರಣೆ:

"ಈ ದ್ರಾವಣವನ್ನು.... **ದುಂಡಾದ** ಗಾಜಿನ ಬಿರಡೆಯಿಂದ ಕೂಡಿದ ಸೀಸೆಯಲ್ಲಿರಿಸಬೇಕು."

ಮೂಲ ಹೀಗಿದೆ:

"The solution should be.... kept in bottle with **ground** glass stopper."
'Ground glass' ಎಂಬುದು 'round glass' ಆಗಿರುವ ಪವಾಡದ ರಹಸ್ಯೋದ್ಘಾಟನೆ ಆಗುವುದು ಮೂಲವನ್ನು ನೋಡಿದಾಗಲೇ. ವಿಷಯದ ನಿಖರತೆಯ ಬಗ್ಗೆ ನಮ್ಮ ಗಮನ ಎಷ್ಟು ಹೆಚ್ಚಾಗಿರಬೇಕೆಂಬುದಕ್ಕೆ ಇದೊಂದು ನಿದರ್ಶನ ಅಷ್ಟೆ.

## ಪಾರಿಭಾಷಿಕ ಪದಗಳು

ಪಾರಿಭಾಷಿಕ ಪದಗಳ ಬಳಕೆಯ ಸಂದರ್ಭದಲ್ಲಿಯೂ ಸಂಪಾದಕರು ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಇಲ್ಲವಾದಲ್ಲಿ 'Microscope' (ಸೂಕ್ಷ್ಮದರ್ಶಕ) 'Telescope' (ದೂರದರ್ಶಕ)ವಾಗಿ ಬಿಡುವ ಅಪಾಯವೂ, ಅವಿವೇಕವೂ ಸಂಭವಿಸಬಹುದು. ಅರೆ-ಬರೆಯಾಗಿ, ಈ ಪಾರಿಭಾಷಿಕ ಪದಗಳನ್ನು ಅನುವಾದಿಸದೆ ಇಟ್ಟುಕೊಂಡಾಗ, ಉದಾಹರಣೆಗೆ,
"ಹೆಚ್ಚಿನ ಕಾನ್ಸೆಂಟ್ರೇಷನ್‌ಗಳಲ್ಲಿ.. ಬೆಳಕನ್ನು ವಸ್ತುವು ಅಬ್‌ಸಾರ್ಬ್ ಮಾಡುವುದು."
ಕೃತಕತೆಗಂತೂ ಎಡೆ ದೊರೆಯುತ್ತದೆ.
ಈ ಪಾರಿಭಾಷಿಕ ಪದಗಳ ಸಮಸ್ಯೆ ವಿಜ್ಞಾನ, ತಂತ್ರಜ್ಞಾನಗಳ ಕ್ಷೇತ್ರದಲ್ಲಿ ಮಾತ್ರವಲ್ಲದೆ ಸಾಹಿತ್ಯ ಕ್ಷೇತ್ರದಲ್ಲಿಯೂ ಕಾಣ ದೊರೆಯುತ್ತದೆ – ಪ್ರಮಾಣದಲ್ಲಿ ವ್ಯತ್ಯಾಸವಾದರೂ.

## ಸಾಂಸ್ಕೃತಿಕ ಟಿಪ್ಪಣಿಗಳು

ಬೇರೊಂದು ಸಂಸ್ಕೃತಿಗೆ ಸೇರಿದ ಗ್ರಂಥಗಳನ್ನು ಅನುವಾದಿಸುವ ಸಂದರ್ಭದಲ್ಲಿ ಸಾಂಸ್ಕೃತಿಕ ಟಿಪ್ಪಣಿಗಳನ್ನು ಒದಗಿಸುವುದು ಅನುವಾದಕನ / ಸಂಪಾದಕನ ಜವಾಬ್ದಾರಿಯೂ ಆಗಿರುತ್ತದೆ. ಉದಾಹರಣೆಗೆ, ಗಾಂಧೀಜಿಯವರ ಆತ್ಮಕಥೆಯ ಅನುವಾದದಲ್ಲಿ ಬಂದಿರುವ ಕೆಲವು ಶಬ್ದಗಳನ್ನು ಗಮನಿಸಬಹುದು.

"...Mr. Baker and his party would not travel on the sabbath" (P. 101)

ಇದರ ಅನುವಾದ: (ಸಾಬತ್) ಮಿ. ಬೇಕರ್ ಮತ್ತು ಸಂಗಡಿಗರು ಪ್ರಯಾಣಮಾಡುತ್ತಿರಲಿಲ್ಲ.

'Sabbath' ಗೆ ಕೊಡಲಾಗಿರುವ ವಿವರಣೆ ಇಂತಿದೆ; "Sabbath... a time of rest" (Chambers's Twentieth Century Dictionary, P. 968 (Edn: 1954)

ಅಂತೆಯೇ 'New World' ಎಂಬುದನ್ನು 'ನವೀನ ಜಗತ್ತು' ಎಂದು ಅನುವಾದಿಸಿಕೊಂಡರೆ ಸಾಲದು. ಅದು ಏನನ್ನು ಸೂಚಿಸುತ್ತಿದೆ ಎಂಬುದನ್ನು ತಿಳಿಯಪಡಿಸಬೇಕು. ಮೇಲೆ ಉಲ್ಲೇಖಿಸಿರುವ ಕೋಶದಲ್ಲಿ ಈ ಶಬ್ದಕ್ಕೆ ಈ ವಿವರಣೆಯನ್ನು ಕೊಡಲಾಗಿದೆ. "New World: North and South America" (P. 720)

ಇದೇ ರೀತಿ, ಭಾರತೀಯ ಸಂಸ್ಕೃತಿಗೆ ವಿಶಿಷ್ಟವಾಗಿರುವ 'ತೀರ್ಥ', 'ಪ್ರಸಾದ', 'ಪ್ರದಕ್ಷಿಣೆ', 'ದಕ್ಷಿಣೆ', 'ಚತುರ್ಮಾಸ', 'ಸಪ್ತಪದಿ', 'ಏಕಾದಶಿ', 'ಬ್ರಹ್ಮಚಾರಿ' ಮೊದಲಾದ ಶಬ್ದಗಳು ಕಾಣಿಸಿಕೊಂಡಿರುವಲ್ಲಿ ಮೂಲಶಬ್ದಗಳನ್ನೇ ಅಥವಾ ಶಾಬ್ದಿಕ ಅನುವಾದವನ್ನೇ ಕೊಟ್ಟಾಗಲೂ ಸಾಂಸ್ಕೃತಿಕ ಟಿಪ್ಪಣಿಗಳು ಅಗತ್ಯವಾಗುತ್ತವೆ.

## ವಾಕ್ಯರಚನೆಯ ಸಮಸ್ಯೆಗಳು

ಅಭಿವ್ಯಕ್ತಿಯಲ್ಲಿ ಸಮರ್ಪಕ ವಾಕ್ಯರಚನೆಗೆ ಇರುವ ಪ್ರಾಮುಖ್ಯವನ್ನು ಹೆಚ್ಚಾಗಿ, ಒತ್ತಿ ಹೇಳಬೇಕಾಗಿಲ್ಲ. ಈ ರಚನೆ ದೋಷಪೂರ್ಣವಾಗಿದ್ದಲ್ಲಿ ಕೃತಕತೆಗೆ, ಅನರ್ಥಕ್ಕೆ, ಸಂದಿಗ್ಧತೆಗೆ, ಅಪಾರ್ಥಕ್ಕೆ ಎಡೆದೊರೆಯುತ್ತದೆ. ಹೀಗಾಗಿ ಅನುವಾದಕ / ಸಂಪಾದಕ ಎಚ್ಚರವಹಿಸಬೇಕಾಗುತ್ತದೆ. ಕೆಲವು ಉದಾಹರಣೆಗಳನ್ನು ನೋಡಬಹುದು:

(i) "ಸಂಶೋಧನೆ ಮಾಡುತ್ತಿರುವಾಗ ಲಾರ್ಡ್ ರ‍್ಯಾಲೆಯು ೧೮೯೨ರಲ್ಲಿ ಗಾಳಿಯ ನೈಟ್ರೋಜನ್ ಸಾಂದ್ರತೆ ಹೆಚ್ಚಾಗಿತ್ತು."

ಇದಕ್ಕೆ ಏನೆಂದು ಅರ್ಥ ಮಾಡಬೇಕು?

(ಅ) "೧೮೯೨ರಲ್ಲಿ (ಮಾತ್ರವೇ) ಗಾಳಿಯ ನೈಟ್ರೋಜನ್ ಸಾಂದ್ರತೆ ಹೆಚ್ಚಾಗಿತ್ತು" ಎಂದೇ,
ಅಥವಾ

(ಆ) "ಲಾರ್ಡ್‌ರ‍್ಯಾಲೆ ಸಂಶೋಧನೆ ಮಾಡುತ್ತಿರುವಾಗ ನೈಟ್ರೋಜನ್ ಸಾಂದ್ರತೆ ಹೆಚ್ಚಾಗಿತ್ತು" ಎಂದೇ,
ಅಥವಾ

(ಇ) "ಸಂಶೋಧನೆ ಮಾಡದಿದ್ದ ಅವಧಿಯಲ್ಲಿ ಈ ಸಾಂದ್ರತೆ ಕಡಿಮೆಯಾಗಿರುತ್ತಿತ್ತು" ಎಂದೇ?

(ii) "**ಎರಡು ತಿಂಗಳ ಹಿಂದೆ ರಾಲೋ ನಿಧನರಾದುದನ್ನು ಕೇಳಿ** ನನಗೆ ತುಂಬ ವಿಷಾದವಾಯಿತು."
"ರಾಲೋ ಸತ್ತು ಎರಡು ತಿಂಗಳಾಯಿತು" ಎಂದು ಅರ್ಥೈಸಬೇಕೇ ಅಥವಾ
"ರಾಲೋ ಸತ್ತುದನ್ನು ಕೇಳಿ ಎರಡು ತಿಂಗಳಾಯಿತು" ಎಂದೇ?

(iii) "**ಚಲುವಾಂಬಾ ಆಸ್ಪತ್ರೆಯಲ್ಲಿ ಅತ್ಯಾಚಾರ ನಡೆದ** ಬಗ್ಗೆ ಪ್ರಮಾಣಪತ್ರವನ್ನು ಕೊಡದೆ ಸತಾಯಿಸುತ್ತಿದ್ದಾರೆ." ಇದರ ಅರ್ಥವೇನು? "ಚಲುವಾಂಬಾ ಆಸ್ಪತ್ರೆಯಲ್ಲಿ ಅತ್ಯಾಚಾರ ನಡೆಯಿತು ಎಂದೇ ಅಥವಾ (ಬೇರೆಲ್ಲೋ ನಡೆದ) ಅತ್ಯಾಚಾರದ ಬಗ್ಗೆ ಆಸ್ಪತ್ರೆಯವರು ಪ್ರಮಾಣಪತ್ರ ಕೊಡುತ್ತಿಲ್ಲ" ಎಂದೇ?

## ಉದ್ಧರಣಗಳ ಪರಿಷ್ಕರಣ

ಎರಡನೆಯ ಆಕರದಿಂದ ತೆಗೆದುಕೊಂಡಿದ್ದರಿಂದಲೋ, ಅಥವಾ ಅಚ್ಚಿನ ತಪ್ಪಿನಿಂದಾಗಿಯೋ ಉದ್ಧರಣಗಳಲ್ಲಿ ಹಾಗೂ ಉಲ್ಲೇಖಗಳಲ್ಲಿ / ಅಡಿಟಿಪ್ಪಣಿಗಳಲ್ಲಿ ತಪ್ಪುಗಳು ಕಾಣಿಸಿಕೊಂಡಿರುವುದುಂಟು. ಸಂಸ್ಕೃತ-ಪ್ರಾಕೃತ ಭಾಷೆಗಳ ಹಾಗೂ ಇಂಗ್ಲಿಷಿನ ಆಕರಗಳ ಹೆಚ್ಚಿನ ಪರಿಚಯ ಅನುವಾದಕರಿಗೆ ಇಲ್ಲದೆ ಇದ್ದ ಸಂದರ್ಭಗಳಲ್ಲಿ ಅಂಕಿತನಾಮಗಳಿಂದ ಹಿಡಿದು ದೀರ್ಘ ಉಲ್ಲೇಖಗಳವರೆಗೆ ಇಂಥ ತಪ್ಪುಗಳು ಕಾಣಿಸಿಕೊಂಡಿರುತ್ತವೆ. ಓದುಗರ ದೃಷ್ಟಿಯಿಂದ ಅಂಥ ತಪ್ಪುಗಳನ್ನು ಸರಿಪಡಿಸುವುದು ಸಂಪಾದಕರ ಹೊಣೆಗಾರಿಕೆಯೇ ಆಗಿರುತ್ತದೆ. ಅಂಥ ಸಂದರ್ಭಗಳಲ್ಲಿ ಮೂಲ ಆಕರಗಳನ್ನು ಪರಿಶೀಲಿಸಿ, ಸರಿಪಡಿಸುವ ಶ್ರಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಅಂಬೇಡ್ಕರ್ ಅವರ ಸಮಗ್ರ ಕೃತಿಗಳ ಅನುವಾದದ ಪರಿಷ್ಕರಣದಲ್ಲಿ ಈ ಬಗೆಯ ಕ್ರಮಗಳನ್ನು ಅನುಸರಿಸಲಾಗಿದೆ. ಮೂಲದಲ್ಲಿ ಸರಿಯಾಗಿರವುದನ್ನು ತಪ್ಪಾಗಿ ಗ್ರಹಿಸಲಾಗಿರುವ ಅನೇಕ ಸಂದರ್ಭಗಳನ್ನು ಸರಿಪಡಿಸಲಾಗಿದೆ.

## ಹೆಚ್ಚಿನ ಮಾಹಿತಿಗಳು

ಮೂಲದಲ್ಲಿ ಪ್ರಸ್ತಾಪಿತವಾಗಿರುವ ವಿಚಾರಗಳಿಗೆ ಸಂಬಂಧಿಸಿದಂತೆ, ತಮ್ಮ ಅರಿವಿಗೆ ಬಂದಿರುವಂಥ ಹೆಚ್ಚಿನ ಮಾಹಿತಿಯನ್ನು ನೀಡುವುದೂ ಸಂಪಾದಕರು ಮಾಡಬಹುದಾದ, ಅಪೇಕ್ಷಣೀಯವಾದ ಕಾರ್ಯವೇ ಆಗಿರುತ್ತದೆ. ಅನುವಾದಕರೇ ತಜ್ಞರಾಗಿರುವ ಸಂದರ್ಭದಲ್ಲಿ ಅವರೇ ಇಂಥ ಮಾಹಿತಿಯನ್ನು ಒದಗಿಸಬಹುದು. ಅನುವಾದಕರೇ ಸಂಪಾದನ ಕಾರ್ಯವನ್ನು ನಿರ್ವಹಿಸಿದ ಸಂದರ್ಭದಲ್ಲಿಯೂ ಇಂಥ ವಿಶೇಷ ಮಾಹಿತಿಗಳನ್ನು ಒದಗಿಸಿರುವುದಕ್ಕೆ ಪ್ರೊ. ಎನ್. ಬಾಲಸುಬ್ರಹ್ಮಣ್ಯ ಅವರು ಅನುವಾದಿಸಿಕೊಟ್ಟಿರುವ ಅರಿಸ್ಟಾಟಲ್, ಹೊರೇಸ್ ಮುಂತಾದವರ ಕೃತಿಗಳಲ್ಲಿ ಇಂಥ ನಿದರ್ಶನಗಳನ್ನು ಕಾಣಬಹುದು. ನಾನೂ ಅನೇಕ ಅನುವಾದಗಳಲ್ಲಿ ಈ ಬಗೆಯ ಹೆಚ್ಚಿನ ಮಾಹಿತಿಯನ್ನು ಒದಗಿಸಿದ್ದೇನೆ.

ಅನುವಾದಗಳ ಸಂಪಾದನ ಕಾರ್ಯ ತುಂಬ ಗುರುತರವಾದ, ಜವಾಬ್ದಾರಿಯುತವಾದ, ಪಾಂಡಿತ್ಯಪೂರ್ವಕವಾಗಿ ನಿರ್ವಹಿಸಬಹುದಾಗಿರುವ, ನಿರ್ವಹಿಸಬೇಕಾಗಿರುವಂಥದು. ಇದರ ಪ್ರಮುಖ ಅಂಶಗಳನ್ನು ಮಾತ್ರವೇ ಇಲ್ಲಿ ಚರ್ಚಿಸಲಾಗಿದೆ. ಇದರ ಸವಿವರವಾದ ಚರ್ಚೆ ಒಂದು ಪ್ರೌಢ ಪ್ರಬಂಧದ ವಸ್ತುವೇ ಆಗಬಹುದು. ಈ ಚರ್ಚೆಯಲ್ಲಿ ಬಳಸಿಕೊಳ್ಳಲಾಗಿರುವ ನಿದರ್ಶನಗಳಿಗೆ ಉದ್ದೇಶಪೂರ್ವಕವಾಗಿಯೇ ನಾನಿಲ್ಲಿ ಆಕರಗಳನ್ನು ಉಲ್ಲೇಖಿಸಿಲ್ಲ. ಸಂಬಂಧಪಟ್ಟ ಅನುವಾದಕರಿಗೆ ಕಿರಿಕಿರಿ ಉಂಟಾಗಬಾರದು ಎಂಬುದು, ಸಮಸ್ಯೆಗಳನ್ನು ಎತ್ತಿ ತೋರಿಸಿ, ಸಾಧ್ಯವಿದ್ದ ಮಟ್ಟಿಗೂ ಅಂಥ ದೋಷಗಳನ್ನು ನಿವಾರಿಸುವತ್ತ ಗಮನ ಹರಿಯುವಂತಾಗಲಿ ಎಂಬುದು ನನ್ನ ಉದ್ದೇಶವಾಗಿರುವುದರಿಂದ ಹಾಗೆ ಮಾಡಿದ್ದೇನೆ. ಅಂತೆಯೇ ಯಾವುದೇ ಉದಾಹರಣೆಯೂ ಕಾಲ್ಪನಿಕವಲ್ಲ ಎಂಬುದನ್ನು ಸ್ಪಷ್ಟಪಡಿಸಬಯಸುತ್ತೇನೆ. ಅನುವಾದ-ಸಂಪಾದನ ಕಾರ್ಯಗಳನ್ನು ಕೈಗೆತ್ತಿಕೊಳ್ಳುವವರಿಗೆ ಈ ಕೆಲವು ಸಲಹೆ-ಸೂಚನೆಗಳು ಪಥ್ಯವೆಂದು ತೋರಿದರೆ, ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.



# ಹಸ್ತಪ್ರತಿ ಸಿದ್ಧತೆ ಮತ್ತು ಪ್ರಕಾಶಕರ ಹೊಣೆಗಾರಿಕೆ

ಡಾ। ವಿಜಯಾ

ಒಂದು ಪುಸ್ತಕವನ್ನು ಪ್ರಕಾಶನಕ್ಕೆ ಸ್ವೀಕರಿಸುವುದೆಂದರೆ ತುಂಬ ಸರಳವಾದ ಸಂಗತಿಯೇನಲ್ಲ. ಈಚೆಗೆ ಯಾರು ಬೇಕಾದರೂ ಪ್ರಕಾಶಕರಾಗಬಹುದು. ಅದರಲ್ಲೂ ಮುದ್ರಣವೆಚ್ಚ ತೂಗಿಸುವಷ್ಟು ಆರ್ಥಿಕ ಅನುಕೂಲವಿದ್ದರೆ ಪ್ರಕಾಶಕರಾಗಿಬಿಡಬಹುದು..ಆ ಪುಸ್ತಕಗಳು ಬೇಗ ಮಾರಾಟವಾಗಿ ತಾವು ಲಾಭ ಮಾಡಿಬಿಡುತ್ತೇವೆಂಬ ಹುಸಿ ನಂಬಿಕೆ ಹೆಚ್ಚಾಗಿದೆ. ಪುಸ್ತಕ ಪ್ರಕಾಶನವೂ ಒಂದು ಉದ್ಯಮ. ಜೊತೆಗೆ ಅದು ಸಾಹಿತ್ಯ ಪರಿಚಾರಿಕೆಯೂ ಆಗಿದೆ. ಇತರ ಎಲ್ಲ ಉದ್ಯಮಗಳಿಗೆ ಇರಬೇಕಾದ ಸಿದ್ಧತೆಯನ್ನು ಇದೂ ಬೇಡುತ್ತದೆ. ಬಹುತೇಕ ಪ್ರಕಾಶಕರಿಗೆ ಲೇಖಕರೇ ಬೀಜಧನ ಕೊಡುವ ಪರಿಪಾಠವೂ ಬೆಳೆಯುತ್ತಿದೆ. ಪ್ರಕಾಶಕರಿಗೆ ಪುಸ್ತಕ ಪ್ರಕಾಶನ ಕೇವಲ ವ್ಯಾಪಾರವಲ್ಲ, ಅದರ ಹಿಂದೆ ಶುದ್ಧ ಅಭಿರುಚಿ, ಸಾಮಾಜಿಕ ಸ್ವಾಸ್ಥ್ಯದಂತಹ ಗುರುತರ ಜವಾಬ್ದಾರಿಯೂ ಇರುತ್ತದೆ. ಬಹುತೇಕ ಪ್ರಕಾಶಕರಲ್ಲಿ ತಾವು ಪ್ರಕಟಣೆಗೆ ಪಡೆದ ಹಸ್ತಪ್ರತಿಯನ್ನು ಒಮ್ಮೆ ಓದಿ ನೋಡುವ ಪರಿಪಾಠವೂ ಇದ್ದಂತಿಲ್ಲ. ಪುಸ್ತಕ ಪ್ರಕಾಶನಕ್ಕೆ ಅಗತ್ಯವಾದ ನಿಬಂಧನೆಗಳ ತಿಳಿವಳಿಕೆ ಹಾಗಿರಲಿ ಪುಸ್ತಕದ ಸಿದ್ಧತೆಯ ಎಲ್ಲ ಕಾರ್ಯಕ್ಕೂ ಲೇಖಕರು ಅಥವಾ ಮುದ್ರಕರನ್ನೇ ಅವಲಂಬಿಸುವುದನ್ನೂ ಕಾಣುತ್ತಿದ್ದೇವೆ.

ವಿದೇಶಗಳಲ್ಲಿ ಅಥವಾ ಅನೇಕ ಪ್ರಸಿದ್ಧ ಪ್ರಕಾಶಕರಲ್ಲಿ ಅದೊಂದು ದೊಡ್ಡ ವ್ಯವಸ್ಥೆಯೇ ಇರುತ್ತದೆ. ಯಾವ ಹಸ್ತಪ್ರತಿಯೂ ಅದು ಇದ್ದಂತೆಯೇ ಮುದ್ರಣಕ್ಕೆ ಹೋಗುವುದಿಲ್ಲ. ಪ್ರತಿಯೊಂದು ಸಾಲು, ಪದಗಳನ್ನೂ ಪರಿಶೀಲಿಸಲು ಸಂಪಾದಕ ಮಂಡಳಿಯಿರುತ್ತದೆ. ದೋಷಗಳನ್ನು ಸರಿಪಡಿಸಿ, ಎಡಿಟ್ ಮಾಡಿಯೇ ಮುದ್ರಣಕ್ಕೆ ಕಳಿಸುತ್ತಾರೆ. ಕೆಲವೊಮ್ಮೆ ಅವರೆಷ್ಟೇ ಪ್ರಸಿದ್ಧರಾಗಿದ್ದರೂ ಲೇಖಕರಿಗೇ ಹಸ್ತಪ್ರತಿ ಹಿಂತಿರುಗಿಸಿ ಇಂತಿಂಥ ವಾಕ್ಯ, ಪದ, ಅಭಿಪ್ರಾಯ, ವಿರೋಧಾಭಿಪ್ರಾಯಗಳಿವೆ ಎಂದು ಸೂಚಿಸಿ ಸರಿಪಡಿಸಲು ಹೇಳುತ್ತಾರೆ. ಪ್ರಕಾಶಕರು ಒಂದು ಹಸ್ತಪ್ರತಿಯನ್ನು ಒಪ್ಪಿ ಪ್ರಕಟಿಸುತ್ತಾರೆಂಬುದೇ ಒಂದು ದೊಡ್ಡ ಸಂಗತಿ. ಕನ್ನಡದ ಸಂದರ್ಭದಲ್ಲಿ ಇಷ್ಟು ಕಟ್ಟುನಿಟ್ಟಿನ ವ್ಯವಸ್ಥೆ ಇನ್ನೂ ಬಂದಂತಿಲ್ಲ. ಆದರೂ ಕೆಲವು ಪ್ರತಿಷ್ಠಿತ ಪ್ರಕಟಣಾ ಸಂಸ್ಥೆಗಳು ಈ ಬಗೆಯ ಎಚ್ಚರವಹಿಸುತ್ತವೆ. ಕೆಲವು ಸಂಸ್ಥೆಗಳಲ್ಲಿ ತಜ್ಞರ ಸಲಹಾ ಮಂಡಳಿಯೇ ಇರುತ್ತದೆ. ಧಾರವಾಡದ 'ಮನೋಹರ ಗ್ರಂಥಮಾಲೆ'ಯಲ್ಲಿ ಜಿ.ಬಿ. ಜೋಶಿಯಂಥ ತಿಳಿವಳಿಕಸ್ಥರಿದ್ದಾಗಲೂ ಕೀರ್ತಿನಾಥ ಕುರ್ತಕೋಟಿ ಮೊದಲಾದ ಹಿರಿಯರು ಸಲಹಾ ಮಂಡಳಿಯಲ್ಲಿದ್ದರು. ಆ ಪ್ರಕಾಶನದಿಂದ ಪುಸ್ತಕ ಪ್ರಕಟವಾಗುತ್ತದೆಂದರೆ ಅದೊಂದು ವಿಶೇಷ ಸಂಗತಿ ಆಗುತ್ತಿತ್ತು. ಕುರ್ತಕೋಟಿಯವರ ಹದ್ದಿನ ಕಣ್ಣಿಗೆ ಬೀಳದೆ ದೋಷಗಳು ನುಸುಳುವುದು ಸಾಧ್ಯವಿರಲಿಲ್ಲ. ಅನಿವಾರ್ಯ ಸಂದರ್ಭಗಳಲ್ಲಿ ಅವರು ಹಸ್ತಪ್ರತಿಯನ್ನು ಕೇವಲ ತಿದ್ದುವುದಲ್ಲ, ಪುನಾರಚಿಸಿದ ಸಂದರ್ಭಗಳೂ ಇದ್ದವು. ಮೈಸೂರಿನ ಕೆಲವು ಪ್ರಕಟಣಾ ಸಂಸ್ಥೆಗಳಲ್ಲೂ ಇಂಥ ವ್ಯವಸ್ಥೆ ಇತ್ತು. ನವಕರ್ನಾಟಕ ಪ್ರಕಾಶನ ಸಂಸ್ಥೆಯಲ್ಲಿ ಇಂಥ ವ್ಯವಸ್ಥೆ ಇದೆ. ವಿಷಯ ವೈವಿಧ್ಯವುಳ್ಳ ಪ್ರಕಟಣೆಗಳಾದ್ದರಿಂದ ಈ ಸಲಹೆಗಾರರು ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಕ್ಷೇತ್ರದವರೂ ಆಗಿರುತ್ತಾರೆ. ಇವೆಲ್ಲ ಒಂದು ಹಸ್ತಪ್ರತಿಯೇ ಪ್ರಕಟಣೆಗೆ ಮೊದಲು ವಿಶೇಷವಾದ ಸಿದ್ಧತೆಗೆ ಒಳಗಾಗಬೇಕೆಂಬುದನ್ನು ಸೂಚಿಸುತ್ತಿವೆಯಲ್ಲವೆ?

ಪತ್ರಿಕೋದ್ಯಮ, ಪ್ರಕಾಶನ, ಮುದ್ರಣ ವಿಭಾಗಗಳಲ್ಲಿ ಒಂದೊಂದು ವಿಭಾಗಕ್ಕೂ ಅದರದ್ದೇ ಆದ ಪ್ರತ್ಯೇಕ ವಿಧಾನಗಳಿವೆ.

ಪತ್ರಿಕೋದ್ಯಮದ ಎಡಿಟಂಗ್ ಅಥವಾ ಹಸ್ತಪ್ರತಿ ತಯಾರಿಯ ವಿಧಾನವೇ ಬೇರೆ ಸ್ವರೂಪದ್ದು. ಹಾಗೆಯೇ ಪ್ರಕಾಶಕನ, ಮುದ್ರಕನ ಜವಾಬ್ದಾರಿಗಳೂ ಬೇರೆಯೇ ಇರುತ್ತವೆ. ಪ್ರತಿಯೊಂದು ಕ್ಷೇತ್ರವೂ ಶಿಸ್ತನ್ನು ಬಯಸುತ್ತದೆ.ಸೃಜನಶೀಲ, ಸೃಜನೇತರ, ಸಂಕಲನ, ಸಂಪಾದನೆ, ಅನುವಾದ ಮೊದಲಾಗಿ ವಿಂಗಡಿಸಿಕೊಂಡರೆ ಸೃಜನಶೀಲ ಕೃತಿಗಳಲ್ಲಿ ಹೆಚ್ಚು ಹಸ್ತಕ್ಷೇಪಕ್ಕೆ ಅವಕಾಶವಿಲ್ಲ. ಎಂದರೆ ಮನಬಂದಂತೆ ಸಾಲುಗಳನ್ನು ಕತ್ತರಿಸಿ (Edit) ಬಿಡಲಾಗದು. ಉಳಿದಂತೆ ಎಲ್ಲ ಹಸ್ತಪ್ರತಿಗೆ ಅನ್ವಯವಾಗುವ ಸಿದ್ಧತೆಯೇ ಇಲ್ಲೂ ಅನ್ವಯವಾಗುತ್ತದೆ. ಕವಿತಾ ಸಂಕಲನವಾದಾಗಲೂ ಸ್ವಾತಂತ್ರ್ಯ ಕಡಿಮೆಯೇ, ಲೇಖಕರ ಗಮನಕ್ಕೆ ತರದೇ ಯಾವ ಬದಲಾವಣೆ, ತಿದ್ದುವಿಕೆ, ಕತ್ತರಿಸುವಿಕೆ ಕೂಡದು.

ಗ್ರಂಥಸಂಪಾದನೆಯಾದಾಗ ಸಾಮಾನ್ಯವಾಗಿ ಸಂಪಾದಕ ಮಂಡಳಿ ನಿರ್ವಹಿಸುತ್ತದಾದ್ದರಿಂದ ಹೆಚ್ಚಾಗಿ ಸಮಸ್ಯೆಗಳಿರುವುದಿಲ್ಲ. ಅನುವಾದ ಕೃತಿಯಾದಾಗ ತೆಗೆದುಕೊಳ್ಳಬೇಕಾದ ಎಚ್ಚರಗಳು ಹಲವು.

ಪ್ರಕಾಶಕರು ಮೊದಲು ಮಾಡಬೇಕಾದ ಕೆಲಸ ಲೇಖಕರೊಂದಿಗೆ ಗೊತ್ತಾದ ನಿಯಮಗಳಡಿ ಒಪ್ಪಂದ ಮಾಡಿಕೊಳ್ಳುವುದು. ಈ ಹಿನ್ನೆಲೆಯಲ್ಲಿ ಸಾಕಷ್ಟು ತಜ್ಞರೊಡನೆ ಸಮಾಲೋಚನೆ ನಡೆಸಿದ ಕನ್ನಡ ಪುಸ್ತಕ ಪ್ರಾಧಿಕಾರವು ಒಂದು ಮಾದರಿಯನ್ನೂ ತಯಾರಿಸಿದೆ. ಅದನ್ನು ಪಡೆದುಕೊಂಡು ಅದೇ ರೀತಿಯ ಒಂದು ಲಿಖಿತ ಒಪ್ಪಂದ ಮಾಡಿಕೊಳ್ಳುವುದು ವಿಹಿತ. ಎಷ್ಟು ಪ್ರತಿಗಳನ್ನು ಮುದ್ರಿಸುತ್ತೀರಿ, ಎಷ್ಟು ಬೆಲೆ ಇಡಬಹುದು, ಈ ಆಧಾರದ ಮೇಲೆ ಶೇಕಡಾ ಎಷ್ಟು ಮೊತ್ತ ಲೇಖಕರಿಗೆ ಗೌರವಧನ ಕೊಡುತ್ತೀರಿ ಮತ್ತು ಆ ಗೌರವಧನ ಹೇಗೆ ಎಂದರೆ ಯಾವ ಯಾವ ಹಂತದಲ್ಲಿ ಸಂದಾಯ ಮಾಡುತ್ತೀರಿ ಎಂಬ ವಿವರ ಒಪ್ಪಂದದಲ್ಲಿರಬೇಕು. ಸಾಮಾನ್ಯವಾಗಿ ಮುಖ ಬೆಲೆಯ ಮೇಲೆ ಶೇಕಡಾ ೧೦ರಂತೆ, ಕೆಲವೊಮ್ಮೆ ಪ್ರಸಿದ್ಧ ಲೇಖಕರಿಗೆ ಶೇ. ೧೫–೨೦ರ ವರೆಗೂ ಕೊಡುವುದುಂಟು. ಎಲ್ಲವೂ ಒಪ್ಪಂದದಲ್ಲಿ ದಾಖಲೆ ಆಗಬೇಕು.

ಸಾಮಾನ್ಯವಾಗಿ ಪುಸ್ತಕಕ್ಕೆ ಬಳಸುವ ಚಿತ್ರಗಳು, ಕಾಗದದ ಮೌಲ್ಯವನ್ನಾಧರಿಸಿ, ತಗಲುವ ವೆಚ್ಚದ ಮೂರು ಪಟ್ಟನ್ನು ಮುಖಬೆಲೆಯಾಗಿ ಇಡುತ್ತಾರೆ. ಪುಸ್ತಕ ಮಾರಾಟದಲ್ಲಿ ಶೇಕಡಾವಾರು ರಿಯಾಯಿತಿ ಇರುತ್ತದೆ. ಇದು ಮಾರಾಟದಲ್ಲಿ ಅನಿವಾರ್ಯ.

ಎಲ್ಲಕ್ಕಿಂತ ಮುಖ್ಯವಾಗಿ ಪ್ರಕಾಶನದ ಹಕ್ಕುಗಳು ಒಂದೇ ಮುದ್ರಣಕ್ಕೋ ಅಥವಾ ಸಂಪೂರ್ಣವೋ ಎಂಬುದೂ ಸ್ಪಷ್ಟವಾಗಬೇಕು. ಕೆಲವೊಮ್ಮೆ ಲೇಖಕರು ಹಕ್ಕುಗಳನ್ನು ಬೇರೆಯವರಿಗೆ ಎಂದರೆ ತಮ್ಮ ಮಕ್ಕಳಿಗೆ, ಬಂಧುಗಳಿಗೆ ಅಥವಾ ಯಾವುದಾದರೂ ಸಂಸ್ಥೆಗೆ ಕೊಟ್ಟಿರುತ್ತಾರೆ. ಅದು ಒಪ್ಪಂದದಲ್ಲಿ ಮುಖ್ಯವಾಗಿ ಪ್ರಕಟಿತ ಪುಸ್ತಕದಲ್ಲೇ ದಾಖಲಾಗಬೇಕು. ಲೇಖಕರು ಹಕ್ಕುಗಳನ್ನು ತಾವೇ ಇಟ್ಟುಕೊಂಡರೂ ಅವರ ನಿಧನಾನಂತರ ಪುಸ್ತಕ ಮರುಮುದ್ರಣಕ್ಕೆ ಬಂದರೆ ಅವರ ವಿಲ್‌ನಲ್ಲಿ ಹಕ್ಕುಗಳನ್ನು ಯಾರಿಗಾದರೂ ಬರೆದಿದ್ದಾರೆಯೇ ಸ್ಪಷ್ಟಪಡಿಸಿಕೊಳ್ಳಬೇಕು. ಹಾಗಿಲ್ಲದಾಗಲೂ ಆ ಲೇಖಕರ ಹೆಂಡತಿ, ಮಕ್ಕಳಿಗೆ ಈ ಕೃತಿಯ ಹಕ್ಕುಗಳು ಹೋಗುತ್ತವೆ. ಯಾವುದೇ ಸಂದರ್ಭದಲ್ಲೂ ಪುಸ್ತಕ

ಮರುಮುದ್ರಣವಾಗಿದ್ದು, ಪ್ರಕಾಶಕರು ಬೇರೆಯವರಾದರೆ ಈ ಮೊದಲು ಪ್ರಕಾಶನ ಮಾಡಿದ ಸಂಸ್ಥೆಯ ಒಪ್ಪಿಗೆ ಇರಬೇಕು. ಮೊದಲ ಮುದ್ರಣದ ಪ್ರತಿಗಳು ಪೂರ್ತಿಯಾಗಿ ಖರ್ಚಾಗಿರಬೇಕು. ಖರ್ಚಾಗಿಲ್ಲವಾದರೆ ಪ್ರಕಾಶಕರ ಬಳಿ ಉಳಿದಿರುವ ಪ್ರತಿಗಳನ್ನು ಕೊಂಡುಕೊಂಡಾದರೂ ಈ ಹೊಸ ಮುದ್ರಣ ಪ್ರಾರಂಭಿಸಬೇಕಾಗುತ್ತದೆ! ಮನಬಂದಂತೆ ಮುದ್ರಿಸುವುದೇ ಪ್ರಕಾಶನ ಆಗುವುದಿಲ್ಲ. ಯಾವುದೇ ಅನುಮತಿ ಲಿಖಿತವಾಗೇ ಇರಬೇಕಾದ್ದು ಅತ್ಯಗತ್ಯ. (ನಾನು ಗಿರೀಶ್ ಕಾರ್ನಾಡರ 'ಮಾ ನಿಷಾದ' ಏಕಾಂಕವನ್ನು ಸೂತ್ರದ ಬೊಂಬೆಗೆ, ಮತ್ತೊಮ್ಮೆ ರಂಗಭೂಮಿಗಾಗಿ ರೂಪಾಂತರಿಸಿದ್ದೆ. ಮೌಖಿಕ ಅನುಮತಿಗಿಂತ ಲಿಖಿತ ಅನುಮತಿಯ ಅಗತ್ಯ ಇದಕ್ಕೆ ಸಂಬಂಧಿಸಿದ ವಿವಾದಗಳೆದ್ದಾಗಲೇ ಅರ್ಥವಾದದ್ದು.) ಅದು ಸ್ನೇಹ ಸಂಬಂಧಕ್ಕೆ ಧಕ್ಕೆ ತರುತ್ತದೆ. ಅನುವಾದಗಳನ್ನು ಪ್ರಕಟಿಸುವಾಗ ಈ ಹಕ್ಕುಗಳ ಬಗ್ಗೆ ತುಂಬಾ ಎಚ್ಚರ ಇರಬೇಕಾಗುತ್ತದೆ. ಮೂಲ ಲೇಖಕರ ಅನುಮತಿ ಇರಲೇಬೇಕು. ಮೂಲ ಲೇಖಕರು ಜೀವಂತ ಇಲ್ಲದಿದ್ದರೆ ಅವರ ಸಂಬಂಧಿಗಳು ಅಥವಾ ವಾರಸುದಾರರು, ಕೆಲವೊಮ್ಮೆ ಆ ಕೃತಿಯನ್ನು ಮೂಲದಲ್ಲಿ ಪ್ರಕಟಿಸಿದ ಸಂಸ್ಥೆಯ ಅನುಮತಿ ಇತ್ಯಾದಿ ತುಂಬ ಮುಖ್ಯವಾಗುತ್ತದೆ. ಲೇಖಕರು ಉಯಿಲಿನಲ್ಲಿ ಮಕ್ಕಳು, ಹೆಂಡತಿ, ಅವರ ಹೆಸರಿನ ಅಥವಾ ಬೇರೆಯ ಟ್ರಸ್ಟ್‌ಗಳಿಗೆ ಹಕ್ಕುಗಳನ್ನು ಬರೆದಿರುವ ಸಾಧ್ಯತೆ ಇರುತ್ತದೆ. ವಿದೇಶಗಳ ಲೇಖಕರಾದಾಗಲಂತೂ ಈ ನಿಯಮ ತುಂಬ ಕಟ್ಟುನಿಟ್ಟಾಗಿರುತ್ತದೆ. ಎಷ್ಟೇ ಪ್ರಯಾಸವಾದರೂ ಅನುಮತಿ ಪಡೆಯದೆ ಪ್ರಕಾಶನ ಮಾಡುವುದು ಒಳ್ಳೆಯದಲ್ಲ. ಲೇಖಕರು ನಿಧನಹೊಂದಿ ೫೦ ವರ್ಷಗಳಾದರೆ ಕೃತಿಯ ಸ್ವಾಮ್ಯ ಸ್ವತಂತ್ರವಾಗುತ್ತಿದೆಂಬ ನಿಯಮವಿದೆ. ರವೀಂದ್ರನಾಥ ಟ್ಯಾಗೂರರ ಕೃತಿಗಳ ಅನುವಾದದ ಹಿನ್ನೆಲೆಯಲ್ಲಿ ಇದನ್ನು ೬೦ ವರ್ಷಕ್ಕೆ ವಿಸ್ತರಿಸಲಾಯಿತು. ಆದರೂ ಎಚ್ಚರಿಕೆ ವಹಿಸುವ ಅಗತ್ಯವಿದೆ.

ಉದಾ : ಶ್ರೀಮತಿ ಬಿ.ಎಸ್. ವೆಂಕಟಲಕ್ಷ್ಮಿ ('ಚಾವಡಿ'ಯ ಸಂಪಾದಕಿ) ಅವರು ಒಮ್ಮೆ ಪ್ರಸಿದ್ಧ ನೃತ್ಯತಾರೆ ಇಸಡೋರಾ ಡಂಕನ್ನಳ ಆತ್ಮಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸಿದರು. ಅದನ್ನು ನಾನೇ ಪ್ರಕಾಶನ ಮಾಡುವ ಮನಸ್ಸಿತ್ತು. ಆದರೆ ಅನುಮತಿ ಪಡೆಯುವುದೇ ಸಾಧ್ಯವಾಗಲಿಲ್ಲ. ಆಕೆ ಪ್ರಜಾವಾಣಿಯನ್ನು ಸಂಪರ್ಕಿಸಿದರು. ಅವರಿಗೂ ಇದೇ ಸಮಸ್ಯೆಯಾಯಿತೆಂದು ತೋರುತ್ತದೆ. ಧೈರ್ಯಮಾಡಿದ ಪಿ. ಲಂಕೇಶರು 'ಲಂಕೇಶ್ ಪತ್ರಿಕೆ'ಯಲ್ಲಿ ಯಾವ ಅನುಮತಿಯೂ ಇಲ್ಲದೆಯೇ ಧಾರಾವಾಹಿಯಾಗಿ ಪ್ರಕಟಿಸಿದರು. ಕನ್ನಡದ ಈ ಪತ್ರಿಕೆ ವಿದೇಶದವರಿಗೆಲ್ಲಿ ತಲುಪೀತೆಂಬ ಧೈರ್ಯವಿರಬೇಕು. ಅನುಮತಿಯ

ಕಾರಣದಿಂದ ಕನ್ನಡದ ಓದುಗರಿಗೆ ಒಂದೊಳ್ಳೆಯ ಆತ್ಮಚರಿತ್ರೆ ಓದುವ ಅವಕಾಶ ತಪ್ಪಿಹೋಗದಿರಲೆಂಬ ಅವರ ಆಶಯವೂ ಒಳ್ಳೆಯದೇ. ಆ ಕೃತಿ ಪುಸ್ತಕ ರೂಪದಲ್ಲಿ ತರಲಿಲ್ಲವೆಂದು ಭಾವಿಸುತ್ತೇನೆ. ವಿದೇಶದ ಕೃತಿಗಳ ಸ್ವಾಮ್ಯ ಪಡೆಯುವುದು ಕಷ್ಟ. ಅವರು ಕೇಳುವ ಗೌರವಧನವೂ ನಮ್ಮ ಅಳವಿಗೆ ಮೀರಿದ್ದು. ಹೀಗಾಗಿ ಎಷ್ಟೋ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸಲು ಸಾಧ್ಯವಾಗಿಲ್ಲ. ಪ್ರಸ್ತುತ ಸಾವಯವ ಕೃಷಿ ಕ್ಷೇತ್ರದಲ್ಲಿ ತೊಡಗಿಕೊಂಡಿರುವ 'ಸಹಜ ಸಾಗುವಳಿ' ಪತ್ರಿಕೆಯ ಸಂಪಾದಕಿ ವಿ. ಗಾಯಿತ್ರಿ ಅವರು 'ತೋತೊ ಚಾನ್' ಎಂಬ ಮಕ್ಕಳ ಪುಸ್ತಕವನ್ನು ಅನುವಾದಿಸಿದರು. ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ ತುಂಬ ಸೊಗಸಾದ ಪುಸ್ತಕ ಅದು. ಏನೇ ಪ್ರಯತ್ನ ಮಾಡಿದರೂ ಮೂಲ ಲೇಖಕರು, ಪ್ರಕಾಶಕರ ಸಂಪರ್ಕ ಸಿಗಲಿಲ್ಲ. ಅನುಮತಿ ಪಡೆಯದೆ ಪ್ರಕಟಿಸುವ ಧೈರ್ಯವಾಗಲಿಲ್ಲ. ಆಕೆ ತನ್ನ ಬಾಲ್ಯದ ಅನುಭವಗಳನ್ನು ಬೆಸೆದು–ಅದೇ ಕೃತಿಯನ್ನು ಆಧರಿಸಿ– ಬೇರೆಯದೇ ಸ್ವತಂತ್ರ ಕೃತಿಯನ್ನು ರಚಿಸಿದರು. ಅದೃಷ್ಟವಶಾತ್ ಅವರ ಮೊದಲ ಅನುವಾದವನ್ನು ನ್ಯಾಷನಲ್ ಬುಕ್ ಟ್ರಸ್ಟ್ ಪ್ರಕಟಿಸಿದರೆ, ಇನ್ನೊಂದು ಕೃತಿಯನ್ನು ಇತ್ತೀಚೆಗೆ ಮೇ ಫ್ಲವರ್ ಪ್ರಕಾಶನದ ಜಿ.ಎನ್. ಮೋಹನ್ ಅವರು ಪ್ರಕಟಿಸಿದರು. ಅದರ ಹೆಸರು 'ತುಂಗಾ'. ಎರಡೂ ಅಪರೂಪದ ಕೃತಿಗಳು.

ಕೆಲವು ಪ್ರಕಾಶಕರು ಪೂರ್ಣ ಹಕ್ಕನ್ನು ತಾವೇ ಪಡೆದುಕೊಂಡಿರುತ್ತಾರೆ. ಹಾಗಾದಾಗ ಲೇಖಕರೂ ತೊಂದರೆಗೆ ಸಿಕ್ಕಿಕೊಳ್ಳುತ್ತಾರೆ. ಉದಾಹರಣೆಗೆ ಕೆ.ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಕವಿತಾ ಸಂಕಲನ, ಎಚ್.ವಿ. ಸಾವಿತ್ರಮ್ಮನವರ ಕೃತಿಗಳ ಸ್ವಾಮ್ಯ ಇತ್ಯಾದಿ. ನರಸಿಂಹಸ್ವಾಮಿಯವರ ಕೃತಿ ಸ್ವಾಮ್ಯವನ್ನು ಹಿಂತಿರುಗಿ ಪಡೆಯಲು ಸಾಕಷ್ಟು ಪ್ರಯಾಸವಾಯಿತೆಂದು ಕೇಳಿದ್ದೇನೆ. ಈಗ ತೆರವಾಗಿದೆ! ಸಾವಿತ್ರಮ್ಮನವರ ಕತೆಗಳನ್ನು ದೂರದರ್ಶನದಲ್ಲಿ ಧಾರಾವಾಹಿಯಾಗಿ ತರಲು ನಿರ್ದೇಶಕ ನಾಗಾಭರಣರಿಗೆ ಸಲಹೆ ಕೊಟ್ಟು ನಾನೇ ಅನುಮತಿ ಕೊಡಿಸಲು ಪರದಾಡಬೇಕಾಯಿತು. ಆಗ ಕೈಗೂಡಿರಲಿಲ್ಲ. ಈಗ ಸ್ವತಂತ್ರವಾಗಿವೆಯಂತೆ!

ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರ ಕೃತಿಗಳ ಸ್ವಾಮ್ಯ ಅವರ ಮೊಮ್ಮಗಳು ನಿರ್ವಹಿಸುವ ಟ್ರಸ್ಟ್ ಕೈಯಲ್ಲಿದೆ. ಅನುಮತಿ ಸುಲಭವಲ್ಲ. ಹಾಗೇ ಬೇಂದ್ರೆ, ರಾಜರತ್ನಂ ಕೃತಿಗಳಿಗೂ ಅನುಮತಿ ಕಷ್ಟ. ಸರ್ಕಾರವೇ ಕೈಕಟ್ಟಿ ಕೂರಬೇಕಾಗಿ ಬಂದಿದೆ. ಈ ಎಲ್ಲ ತೊಡಕುಗಳನ್ನು ನಿವಾರಿಸಿಕೊಂಡು ಅನುಮತಿ ಪಡೆದುಕೊಂಡು, ಲೇಖಕರೊಂದಿಗೆ ಒಪ್ಪಂದವನ್ನು ಮಾಡಿಕೊಂಡ ಮೇಲೆಯೇ ಪ್ರಕಾಶನಕ್ಕೆ ತೊಡಗಬೇಕು. ಕೃತಿಯೊಂದು ಪಠ್ಯಪುಸ್ತಕವಾಗಿ ಆಯ್ಕೆ ಆದಾಗ ಪ್ರಕಾಶಕರಿಗೆ ಕೊಂಚ ಲಾಭವಿದೆ. ಮುಖ್ಯವಾಗಿ ಲೇಖಕರೇ ನಾವೇ ಪ್ರಕಟಿಸುತ್ತೇವೆ ಅನ್ನುವುದುಂಟು! ಇಲ್ಲಿಯೂ ಹಲವು ನಿಯಮಗಳ ಪಾಲನೆಯ ಅಗತ್ಯ ಇದೆ. ಲೇಖಕರೇ ಪ್ರಕಟಿಸುತ್ತೇವೆನ್ನುವುದರ ಹಿಂದೆ ನಾಲ್ಕು ಕಾಸಿನ ಲಾಭದ ಚಿಂತೆ ಇದೆ. ಒಂದೊಮ್ಮೆ ಅವರ ಕೋರಿಕೆ ಒಪ್ಪಿ ಪ್ರಕಾಶಕರು ಅನುಮತಿಸಿದರೂ ಈಗಾಗಲೇ ತಾವು ಪ್ರಕಟಿಸಿದ ಆ ಪುಸ್ತಕದ ಮುದ್ರಿತ ಪ್ರತಿಗಳಲ್ಲಿ ಮಾರಾಟವಾಗದೇ ಉಳಿದ ಪ್ರತಿಗಳನ್ನು ಲೇಖಕರು ಅಥವಾ ಅವರು ಒಪ್ಪಂದ ಮಾಡಿಕೊಂಡ ಬೇರೆ ಪ್ರಕಾಶಕರು ಕೊಂಡುಕೊಳ್ಳಬೇಕು. ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಪಠ್ಯಪುಸ್ತಕಗಳಿಗೆ ಬೆಲೆ ಕಡಿಮೆ ಇಡಬೇಕಾಗಿರುತ್ತದೆ. ಆದ್ದರಿಂದ ಅವರು ಬಳಸುವ ಕಾಗದ, ಮುಖಪುಟದ ರಟ್ಟು, ಬೈಂಡಿಂಗ್ ಎಲ್ಲವೂ ಅಷ್ಟೇನೂ ಶ್ರೀಮಂತವಾಗಿರುವುದಿಲ್ಲ. ಬೆಲೆ ಕಡಿಮೆ ಆದ್ದರಿಂದ ಅದಕ್ಕಿಂತ ಹೆಚ್ಚು ಬೆಲೆ ಇರುವ ನಿಮ್ಮ ಪ್ರಕಟಣೆ ಅದೆಷ್ಟೇ ಅಂದವಾಗಿದ್ದರೂ ಮಾರಾಟವಾಗದೆ ನಷ್ಟಕ್ಕೆ ಒಳಗಾಗಬೇಕಾಗುತ್ತದೆ. ಈ ಎಲ್ಲ ಎಚ್ಚರವಹಿಸದೇ ಹೋದರೆ ಪ್ರಕಾಶಕರು ಹಣದ ಮುಗ್ಗಟ್ಟಿಗೆ ಸಿಕ್ಕಿಕೊಳ್ಳುತ್ತಾರೆ. ಕೆಲವೊಮ್ಮೆ ಲೇಖಕರು ಯಾವುದಾದರೂ ಕೃತಿಯನ್ನು ಆಧರಿಸಿ ಅಥವಾ ರೂಪಾಂತರ ಮಾಡಿರುವುದುಂಟು. ಅಂಥ ಸಂದರ್ಭದಲ್ಲೂ ಮೂಲ ಲೇಖಕರ ಅನುಮತಿ ಅಗತ್ಯ. ಸಾಮಾನ್ಯವಾಗಿ ಕತೆ, ಕಾದಂಬರಿ, ಕಾವ್ಯಗಳನ್ನು ಆಧರಿಸಿ ನಾಟಕಗಳ ರಚನೆಯಾಗುತ್ತದೆ. ಅವರು ಪ್ರದರ್ಶನಕ್ಕೆ ಅನುಮತಿ ಪಡೆದಿರಬಹುದು. ಆದರೆ ಅದನ್ನು ಮುದ್ರಿಸಲು ಮೂಲ ಲೇಖಕರ ಅನುಮತಿ ಇದೆಯೇ ಇಲ್ಲವೇ ಎಂಬುದನ್ನೂ ತಿಳಿದುಕೊಳ್ಳದೇ ನಾಟಕ ಕೃತಿ ಪ್ರಕಟಿಸುವುದರಿಂದ ಮುಂದೆ ತೊಂದರೆಗೆ ಸಿಕ್ಕಿಕೊಳ್ಳುವ ಸಾಧ್ಯತೆಗಳಿವೆ. ಆ ಮೂಲ ಲೇಖಕರ ಕೃತಿಯ ಪ್ರಕಾಶಕರು ಕೂಡಾ ಕೆಲವೊಮ್ಮೆ ಕೇವಲ ಮುದ್ರಣದ ಹಕ್ಕಲ್ಲದೆ ಯಾವುದೇ ಮಾಧ್ಯಮಕ್ಕೆ ಅಳವಡಿಸಲೂ ಅನುಮತಿ ಪಡೆಯಬೇಕೆಂಬ ಶರತ್ತು ಹಾಕಿ ಒಪ್ಪಂದ ಮಾಡಿರುವುದುಂಟು. ಈ ಹೊತ್ತು ಹೊಸ ಹೊಸ ಮಾಧ್ಯಮಗಳ ಆವಿಷ್ಕಾರವಾಗಿದೆ; ಆಗುತ್ತಲೇ ಇದೆ. ಹೀಗಿರುವಾಗ ಪ್ರಕಾಶಕರು ಈ ಒಪ್ಪಂದ ಪತ್ರದ ವಿಚಾರದಲ್ಲಿ ತುಂಬ ಜಾಗರೂಕರಾಗಿರುವುದು ಅತ್ಯಗತ್ಯ.

ಮುಂದಿನ ಹಂತ ಹಸ್ತಪ್ರತಿಯ ಸಿದ್ಧತೆ. ಮೇಲುನೋಟಕ್ಕೆ ಅತ್ಯಂತ ಸರಳ, ತೀರಾ ಪ್ರಾಥಮಿಕ ಸಂಗತಿ ಅನ್ನಿಸಿದರೂ ಇದೊಂದು ಬಹುಶ್ರಮವನ್ನು ಬೇಡುವ ಸಿದ್ಧತೆ. ಯಾವ ಕಾರಣಕ್ಕೂ ನಿರ್ಲಕ್ಷ್ಯ-ಧೋರಣೆ ಸಲ್ಲದು. ಕೃತಿಯ ಅಚ್ಚುಕಟ್ಟು, ಭಾಷಾ ಶುದ್ಧತೆ ಎಲ್ಲವೂ ಒಂದು ಚೌಕಟ್ಟಿನೊಳಗೆ ಬಂದಾಗಲೇ ಚಂದ. ಮುದ್ರಕರು, ಲೇಖಕರ ಮೇಲೆ ಎಲ್ಲ ಹೊಣೆಹಾಕಿ ಪ್ರಕಾಶಕ ಸುಮ್ಮನಿರುವುದು ನಿಜವಾದ ಉದ್ಯಮಿಯ ಲಕ್ಷಣವಲ್ಲ.

ಪಿಎಚ್.ಡಿ. ಪದವಿಗಾಗಿ ಸಿದ್ಧಮಾಡಿದ ಪ್ರೌಢ ಪ್ರಬಂಧಗಳನ್ನು ಪ್ರಕಟಣೆಗೆ ಸ್ವೀಕರಿಸುವಾಗ ಹೆಚ್ಚು ಎಚ್ಚರವಹಿಸಬೇಕಾಗುತ್ತದೆ. ಆ ಪ್ರಬಂಧಗಳು ಅವರಿವರ ಪುಸ್ತಕಗಳಿಂದ ಸಾಲುಗಳನ್ನು ಹಾಗೆ ಹಾಗೇ ಎತ್ತಿಕೊಂಡಿರುವ ಸಂಭವ ಇಲ್ಲದಿಲ್ಲ. ಅಭಿಪ್ರಾಯಗಳೂ ಕೆಲವೊಮ್ಮೆ ನಕಲುಗಳಾಗಿರುತ್ತವೆ. ಇದರ ರಹಸ್ಯ ಬಯಲಾದಾಗ ಅನಗತ್ಯ ವಿವಾದಗಳಾಗಿ ಪ್ರಕಾಶಕರು-ಮುದ್ರಕರು-ವೃಥಾ ಪೇಚಿಗೆ ಸಿಲುಕುತ್ತಾರೆ. ಪ್ರಸಿದ್ಧ ಲೇಖಕರೊಬ್ಬರ ಇಂಥ ಪ್ರಬಂಧ ಪ್ರಕಟಣೆಯ ನಂತರ ಹೀಗೆ ವಿವಾದಕ್ಕೊಳಗಾದ ಪ್ರಸಂಗ ಕೆಲವೇ ವರ್ಷಗಳ ಹಿಂದೆ ನಡೆದದ್ದುಂಟು.

ಕೆಲವು ಪ್ರಸಿದ್ಧ ವ್ಯಕ್ತಿಗಳ ಬಗ್ಗೆ ಬರೆಯುವ ಪುಸ್ತಕಗಳು ಬರಹಗಾರರು ಪ್ರಸಿದ್ಧರೆಂಬ ಕಾರಣಕ್ಕೆ ಪರಿಶೀಲಿಸದೆ ಒಪ್ಪಿಕೊಳ್ಳುವುದೂ ಕೆಲವೊಮ್ಮೆ ವಿಪರೀತ ತೊಂದರೆಗೆ ಕಾರಣವಾಗುತ್ತದೆ. ಪ್ರಸಿದ್ಧ ಸಮಾಜಶಾಸ್ತ್ರಜ್ಞರೊಬ್ಬರು ಬರೆದ ಪುಸ್ತಕವು ಮಾಜಿ ಪ್ರಧಾನಿಗಳನ್ನು ಅವಹೇಳನ ಮಾಡಿದೆ ಎಂಬ ಆರೋಪದ ಮೇಲೆ ಕೆಲವು ವರ್ಷಗಳ ಹಿಂದೆ ಪುಸ್ತಕಗಳ ಮಟ್ಟುಗೋಲು, ಮುದ್ರಣಾಲಯವನ್ನು ಸೀಜ್ ಮಾಡಿದ್ದೂ ಉದಾಹರಣೆ ನಮ್ಮ ಮುಂದಿದೆ! ಬೇರೆಯವರ ಕೃತಿಗಳಿಂದ ಹಾಗೆ ಹಾಗೇ ಎತ್ತಿಕೊಂಡು ಯಾವುದರ ಆಧಾರ ಯಾವುದರಿಂದ ಉಲ್ಲೇಖ ಎಂದೂ ಸೂಚಿಸದೆ ಲೇಖಕರು ಪ್ರಕಟಣೆಗೆ ಕೊಡುವುದರಿಂದಾಗಿ ಪ್ರಕಾಶಕರೂ ತೊಂದರೆಗೆ ಒಳಗಾಗುತ್ತಾರೆ. ಎಲ್ಲರಿಗೂ ಎಲ್ಲವೂ ಗೊತ್ತಿರುವುದಿಲ್ಲ. ಹಾಗಾಗಿ ಆಯಾ ಕ್ಷೇತ್ರದ ತಜ್ಞರಿಗೆ ತೋರಿಸಿ ಮುಂದುವರಿಯುವುದು ವಿಹಿತ.

ಕೆಲವೊಮ್ಮೆ ಸೃಜನಶೀಲ ಕೃತಿಗಳಲ್ಲೂ ಇಂಥ ಅಪಾಯಗಳು ಎದುರಾಗುತ್ತವೆ. ಕವಿತಾ ಸಂಕಲನಗಳಲ್ಲಿ ಈ ಅಪಾಯ ಅಧಿಕ. ಬರಹಗಾರ ಇತರರ ಸಾಲುಗಳನ್ನು ಎತ್ತಿರುವುದು ಹಾಗಿರಲಿ ತನ್ನ ಸಾಲನ್ನೂ ತಾನು ಹಲವು ಬಾರಿ ತನ್ನದೇ ಕವಿತೆಗಳಲ್ಲಿ ಪುನಃ ಸೇರಿಸಿಬಿಡುತ್ತಾನೆ. ಇನ್ನೂ ಮುಂದಿನದು ಅತ್ಯಂತ ಪ್ರಾಥಮಿಕ ವಿವರಗಳು ಆದರೆ ಅದು ತುಂಬಾ ಮುಖ್ಯ ಸಂಗತಿಗಳು ಎಂಬ ಕಾರಣಕ್ಕಾಗಿ ಗಮನಿಸಲೇಬೇಕಾದುವು.

ಹಸ್ತಪ್ರತಿಯಲ್ಲಿ ಶುದ್ಧ ವಾಕ್ಯರಚನೆಯ ಬಗ್ಗೆ ಗಮನ ಇರಬೇಕು. ವಾಕ್ಯದ ಮೊದಲು ಹೇಳಹೊರಟ ವಿಷಯ ಸರಿಯಾಗಿ ಮುಕ್ತಾಯವಾಗಿದೆಯೆ ಎಂದು ಗಮನಿಸಿ. ಭೂತ, ವರ್ತಮಾನ, ಭವಿಷ್ಯತ್‌ಗಳು ವಾಕ್ಯದಲ್ಲಿ ಸರಿಯಾಗಿ ಸೂಚಿತವಾಗಿವೆಯೇ ಎಂಬುದು ಮುಖ್ಯ. ಏಕವಚನದಿಂದ ಆರಂಭಿಸಿ ಬಹುವಚನದಲ್ಲಿ ಮುಕ್ತಾಯ ಮಾಡುವ ಅಥವಾ ಬಹುವಚನವನ್ನು ಏಕವಚನದಲ್ಲಿ ಮುಕ್ತಾಯ ಮಾಡುವ ಅಪಾಯಗಳೂ ಇರುತ್ತವೆ.

ಅತಿ ದೀರ್ಘವಾಕ್ಯಗಳಾದಾಗ ಇಂಥ ಅಪಾಯ ಇನ್ನೂ ಹೆಚ್ಚು. ಇಂಥಲ್ಲಿ ವಾಕ್ಯರಚನೆಯೂ ತಪ್ಪಾಗುವ ಸಂಭವವಿದೆ. ತುಂಬ ಸೂಕ್ಷ್ಮವಾಗಿ ಓದಿಕೊಂಡು ಸರಿಪಡಿಸುವುದು ಅಗತ್ಯ. ಹಾಗೆಯೇ ಪದ ಪ್ರಯೋಗದಲ್ಲೂ ದೋಷಗಳಿರುತ್ತವೆ. ಈಚೆಗೆ ತಪ್ಪು ಪ್ರಯೋಗವೇ ಅತಿಯಾದ ಬಳಕೆಯಿಂದಾಗಿ 'ಸರಿ' ಎಂದು ಒಪ್ಪಿಕೊಳ್ಳುವಂತಾಗಿದೆ. 'ಕಳಕಳಿ'ಯಂಥ ಪದವನ್ನು ಸಂಭ್ರಮಕ್ಕೆ ಸಂವಾದಿಯಾಗಿ ಬಳಸುವುದು ಇತ್ಯಾದಿ ಗಮನಿಸಿ.

**'ಅತ್ಯಂತ ಕಳಕಳಿಯ ಸಮಾರಂಭವಿದು'** ಅಂದರೆ ಏನು ಅರ್ಥ ಬರುತ್ತದೆ? ಹೇಳುವವರ ಮನಸ್ಸಿನಲ್ಲಿ ಅದೊಂದು ಸಂಭ್ರಮ ಸಂತೋಷ ಎಂಬ ಭಾವನೆ. ಆದರೆ ಕಳಕಳಿಗೆ ಆ ಅರ್ಥಬರುವುದಿಲ್ಲ.
ಬರಹದಲ್ಲೂ ಕೆಲವು ತಪ್ಪು ಪ್ರಯೋಗಗಳನ್ನು ಅವಿರುವಂತೆಯೇ ಒಪ್ಪಿಕೊಳ್ಳುವ ಹಂತ ತಲಪಿದ್ದೇವೆ.

| | |
|---|---|
| **ಜಿಗುಪ್ಸೆ-ಜುಗುಪ್ಸೆ** | **ವೈಶಿಷ್ಟ್ಯತೆ-ವೈಶಿಷ್ಟ್ಯ** |
| **ಚಳುವಳಿ-ಚಳವಳಿ** | **ಕ್ರೋಢೀಕರಿಸು-ಕ್ರೋಡೀಕರಿಸು** |
| **ಹಾರ್ಧಿಕ-ಹಾರ್ದಿಕ** | **ವೈವಿಧ್ಯತೆ-ವೈವಿಧ್ಯ** |
| **ಉಚ್ಛಾರಣೆ-ಉಚ್ಚಾರಣೆ** | **ಕೂಲಂಕುಶ-ಕೂಲಂಕಷ** |

ಬೋಲ್ಡ್ ಅಕ್ಷರಗಳಲ್ಲಿರುವ ಪದಗಳು ಸರಿ.
ಹೀಗೆ ನೂರಾರು ಪ್ರಯೋಗಗಳು ತಪ್ಪಾಗಿ ಬಳಕೆಯಾಗುತ್ತಿವೆ. ತಪ್ಪು/ಸರಿಗಳ ಮಧ್ಯೆ ಗೊಂದಲಮಯ ಅಭಿಪ್ರಾಯಗಳಿವೆ.

ನಿರ್ದೇಶನ-ಪದವನ್ನು **ನಿರ್ದೇಶನ** ಎಂದು ಬರೆಯುವುದು ರೂಢಿಯಾಗಿದೆ. ನಿಘಂಟುಗಳಲ್ಲೂ ಇಂಥ ದೋಷ ಉಳಿದುಹೋಗಿದೆ. ಉಚ್ಚಾರಣೆಯಲ್ಲಿ ಅರ್ಕಾವತ್ತು (ೞ) ಮೊದಲು ಬರುವುದರಿಂದ **ನಿರ್ದೇಶನ** ಸರಿ ಎಂಬ ವಾದ ಮಂಡಿಸುತ್ತಾರೆ. 'ದೇ' ಎನ್ನುವುದು ಒಂದೇ ಅಕ್ಷರ 'ಪೂ' ಇದ್ದ ಹಾಗೆ. ಕರ್ಪೂರ ಪದವನ್ನು 'ಕರ್ಪಊರ' ಎಂದು ಬರೆದರೆ ತಪ್ಪಾಗುವ ಹಾಗೆ ನಿರ್ದೇಶನವನ್ನು ನಿರ್ದೇಶನ ಮಾಡಿದರೆ ತಪ್ಪು. ಹೀಗೆ ಅನೇಕ ಶಬ್ದಗಳನ್ನು ಉದಾಹರಿಸಬಹುದು.

ಪ್ರಾರಂಭದ ವಾಕ್ಯಕ್ಕೂ ಕೊನೆಯ ವಾಕ್ಯಕ್ಕೂ ಅರ್ಥ ವ್ಯತ್ಯಾಸ-ವಿರೋಧಾಭಿಪ್ರಾಯ ಬರುವಂತೆ ಇದ್ದಾಗಲೂ ಲೇಖಕರ ಗಮನಕ್ಕೆ ತಂದು ಸರಿಪಡಿಸಬೇಕಾಗುತ್ತದೆ.

ಯಾವುದೇ ಕಾರಣಕ್ಕೂ ವ್ಯಕ್ತಿ ನಿಂದನೆ, ಜಾತಿನಿಂದನೆ ನುಸುಳದಂತೆ ಎಚ್ಚರವಹಿಸಬೇಕು. ಈಚೆಗೆ ಚಲನಚಿತ್ರದಂಥ ದೃಶ್ಯಮಾಧ್ಯಮದಲ್ಲಿ ಕೂಡಾ ಈ ನಿಯಮ ಪಾಲಿಸುತ್ತಾರೆ. ಪತ್ರಿಕೋದ್ಯಮದಲ್ಲೂ ಇಂಥ ಎಚ್ಚರಿಕೆಯ ಕ್ರಮಗಳಿವೆ. ಹಾಗೆ ನಿಯಮ ಮೀರಿ ವ್ಯಕ್ತಿನಿಂದನೆ ಇದ್ದಲ್ಲಿ ಅದು ಮಾನನಷ್ಟ ಮೊಕದ್ದಮೆಗೆ ಕಾರಣವಾಗುತ್ತದೆ. ಹಾಗೇ ಜಾತಿನಿಂದನೆಯಂಥ ಒಂದೇ ಒಂದು ಪದ, ಬೈಗುಳಗಳಿದ್ದರೂ ತೆಗೆದು ಹಾಕುವುದೊಳಿತು.

ಯಾವುದೇ ಪ್ರಮುಖ ಘಟನೆ ನಡೆದ ಮಾಹಿತಿ ಕುರಿತು ಹೇಳುವಾಗ ಲೇಖಕರು ಇಸವಿ, ತಾರೀಖು ಇತ್ಯಾದಿ ಸೂಚಿಸಿದ್ದರೆ ಅವು ಸರಿಯಾಗಿವೆಯೇ ಎಂಬುದನ್ನು ಪರಿಶೀಲಿಸಬೇಕು. ಮುಖ್ಯ ಘಟನೆಗಳಾದಾಗಲೂ ಅವು ಸರಿಯೇ ಎಂದು ಪರಿಶೀಲಿಸುವ ಅಗತ್ಯವಿದೆ. ತಪ್ಪು ಮಾಹಿತಿಯಾದರೆ ಅವೇ ಶಾಶ್ವತವಾಗಿ ಉಳಿದುಬಿಡುವ ಇತರರನ್ನು ತಪ್ಪುದಾರಿಗೆಳೆಯುವ ಸಂಭವ ಇರುತ್ತದೆ. ಐತಿಹಾಸಿಕ ಸಂಗತಿಗಳು, ಪ್ರಸಿದ್ಧ ವ್ಯಕ್ತಿಗಳ ಉಲ್ಲೇಖಗಳು ಇದ್ದಾಗ ಅವುಗಳನ್ನು ಎಲ್ಲಿಂದ ಆಯ್ದುಕೊಳ್ಳಲಾಗಿದೆ ಎಂಬುದರ ಉಲ್ಲೇಖ ಮಾಡಿರುವುದು ಅತ್ಯಗತ್ಯ. ಕೆಲವು ಪ್ರಸಿದ್ಧ ಘಟನೆಗಳಾದಾಗಲೂ ಉಲ್ಲೇಖಗಳಿದ್ದರೆ ಒಳಿತು. ಕೃತಿಯಲ್ಲಿ ಬರುವ ಅಭಿಪ್ರಾಯ, ಉಲ್ಲೇಖಗಳಿಗೆ ಕೃತಿಕಾರರೇ ಹೊಣೆ ಎಂಬ ಸಾಲು ಸೇರಿಸಿ ಜವಾಬ್ದಾರಿ ಕಳೆಯಿತೆಂದುಕೊಳ್ಳುವುದು ಸರಿಯಲ್ಲ. ಸಂಗತಿಗಳು ಮಾನನಷ್ಟಕ್ಕೆ ದಾರಿಯಾದಾಗ ಈ ಯಾವ ಮಾತೂ ರಕ್ಷಿಸುವುದಿಲ್ಲ. ಪ್ರಕಟವಾದ ಕೃತಿಗೆ ಲೇಖಕರಷ್ಟೇ ಜವಾಬ್ದಾರಿ ಪ್ರಕಾಶಕರು, ಮುದ್ರಕರ ಮೇಲೂ ಇರುತ್ತದೆ.

ಲೇಖಕರು ಸಾಮಾನ್ಯವಾಗಿ ಕೆಲವು ಸಂಕ್ಷಿಪ್ತರೂಪಗಳಿಂದ ಸಂಸ್ಥೆ, ಚಳವಳಿ, ಸಂಘಟನೆ, ವ್ಯಕ್ತಿಗಳನ್ನು ಗುರುತಿಸಿಬಿಡುತ್ತಾರೆ. ಆದರೆ ಪ್ರಾರಂಭದಲ್ಲಿ ಒಮ್ಮೆಯಾದರೂ ಆ ಸಂಕ್ಷಿಪ್ತ ರೂಪದ ವಿಸ್ತಾರ ರೂಪವನ್ನು ಕೊಡಬೇಕು.

ಉದಾ : ಕ.ಸಾ.ಪ. (ಕನ್ನಡ ಸಾಹಿತ್ಯ ಪರಿಷತ್ತು) ಹಾಗೇ ಕೆ.ಎಸ್.ಆರ್.ಟಿ.ಸಿ. UNO, WHO, ಎ.ಐ.ಟಿ.ಯು.ಸಿ., ಎಚ್.ಎ.ಎಲ್., ಬಿ.ಎಚ್.ಎಂ.ಎಲ್. ಇತ್ಯಾದಿ....

ಹಾಗೇ ಡಿ.ವಿ.ಜಿ. ವಿ.ಸೀ., ಮಾಸ್ತಿ, ತೀ.ನಂ.ಶ್ರೀ., ಬಿ.ಎಂ.ಶ್ರೀ. ಚಂಪಾ, ಪಾಪು, ಕಂಬಾರ ಮೊದಲಾದ ಹೆಸರುಗಳು. ಒಂದು ಕಡೆಯಾದರೂ ವಿಸ್ತಾರರೂಪ ಕೊಟ್ಟು ಎಂದರೆ ಪಾಟೀಲ ಪುಟ್ಟಪ್ಪ, ಇನ್ನು ಮುಂದೆ ಸಂಕ್ಷಿಪ್ತ ರೂಪ ಪಾಪು ಎಂದು ಬಳಸುತ್ತೇವೆ ಎಂದು ಸೂಚಿಸುವುದು ಒಳಿತು. ಎಲ್ಲ ಓದುಗರಿಗೂ ಸಂಕ್ಷಿಪ್ತರೂಪ ತಿಳಿದಿರುತ್ತದೆಂಬ ಭಾವನೆ ತಪ್ಪು. ಮುಂದಿನ ಪೀಳಿಗೆಗಂತೂ ಇದೊಂದು ಸಮಸ್ಯೆಯಾಗಬಹುದು. ಸಾಧ್ಯವಾದಷ್ಟೂ ಆಯಾ ಹೆಸರಿನ ಹಿಂದೆ ಅವರನ್ನೂ ವಿಶೇಷವಾಗಿ ಗುರುತಿಸುವ ಕ್ಷೇತ್ರದ ಸೂಚನೆಯೂ ಇದ್ದರೊಳಿತು. ಕವಿ, ಕತೆಗಾರ, ವಿಮರ್ಶಕ,

ಚಿತ್ರಕಲಾವಿದ, ಚಲನಚಿತ್ರಕಲಾವಿದ, ಚಳವಳಿಯ ನಾಯಕ, ರಾಜಕಾರಣಿ ಹೀಗೆ... ಇದು ಒಂದೇ ಬಗೆಯ ಹೆಸರಿನ ಒಬ್ಬರಿಗಿಂತ ಹೆಚ್ಚುಜನ ಇದ್ದಾಗಲೂ ಗುರುತಿಸಲು ನೆರವಾಗುತ್ತದೆ.

ಕೆಲವರಲ್ಲಿ ಇತ್ತೀಚೆಗೆ, ಈಚೆಗೆ, ಮೊನ್ನೆಯಷ್ಟೇ ಇತ್ಯಾದಿ ಪದಗಳ ಬಳಕೆಮಾಡಿರುತ್ತಾರೆ. ಹೀಗೆ ಹೇಳಿದರೆ ಇನ್ನು ಹತ್ತಿಪ್ಪತ್ತು ವರ್ಷವಾದ ಮೇಲೆ ಅದು 'ಇತ್ತೀಚೆಗೆ' ಆಗಲಾರದಲ್ಲವೆ? ಸಾಧ್ಯವಾದಷ್ಟು ಇಂಥ ಸಂದರ್ಭಗಳಲ್ಲಿ ಆಯಾ ವಿಷಯಕ್ಕೆ ಸಂಬಂಧಿಸಿದ ಇಸವಿ, ತಾರೀಖು, ತಿಂಗಳು ಸೂಚಿಸುವುದು ಮುಖ್ಯ.

ಕೆಲವರು ತಮ್ಮ ಹೆಸರುಗಳನ್ನು ಹೀಗೇ ಬಳಸಬೇಕೆಂದು ಅಭಿಪ್ರಾಯಪಡುತ್ತಾರೆ. ಉದಾ : ಹೆಸರಿನ ಮುಂದೆ ರಾವ್, ಆಚಾರ್ಯ ಇಂಥದಿರುವವರು ಒಂದು ಸ್ಥಳ (Space) ಬಯಸುತ್ತದೆ. ಕೆಲವರಿಗೆ ಈ Space ಬೇಡ. ಹಾಗೇ ಗಾಯಿತ್ರಿ, ಗಾಯತ್ರಿ, ಸೆಟ್ಟಿ, ಶೆಟ್ಟಿಯಂಥ ಪದಗಳು. ಇದನ್ನೆಲ್ಲ ಕೇಳಿ ತಿಳಿದಾದರೂ ಸರಿ ಸೂಕ್ತ ರೀತಿಯಲ್ಲಿ ಬಳಸಬೇಕು. ಹಾಗೇ ಶೇಕ್ಸ್‌ಪಿಯರ್‌ಗೆ ಷೇಕ್ಸ್‌ಪಿಯರ್ ಅಂತಲೂ ಬರೆಯುತ್ತಾರೆ. ಇಂಥಲ್ಲಿ ಎರಡೂ ತಪ್ಪಲ್ಲ. ಆದರೆ ಎಲ್ಲೆಲ್ಲಿ ಈ ಹೆಸರಿನ ಬಳಕೆಯಾಗುತ್ತದೆಯೋ ಅಲ್ಲೆಲ್ಲ ನೀವು 'ಶ' ಆರಿಸಿದ್ದರೆ ಅದೇ ಇರಬೇಕು. 'ಷ' ಆರಿಸಿದ್ದರೆ ಅದೇ ಎಲ್ಲ ಕಡೆ ಇರಬೇಕು. ಪ್ರತಿಯೊಂದು ವಿಷಯಕ್ಕೂ ಇದು ಅನ್ವಯವಾಗುತ್ತದೆ. ಕೃತಿಯ ಏಕರೂಪತೆಗೆ ಇದು ಅತ್ಯಗತ್ಯ.

ಕೆಲವರು ಈ ಹಿಂದೆ ಹೇಳಿದಂತೆ ಎಂತಲೊ, ಮುಂದೆ ವಿವರಿಸಿರುವಂತೆ ಎಂತಲೊ ಒಂದು ವಿಷಯದ ಪ್ರಸ್ತಾಪದಲ್ಲಿ ಹೇಳಿಬಿಡುತ್ತಾರೆ. ಆದರೆ ಹಾಗೆ ಹಿಂದೆಯಾಗಲಿ ಮುಂದೆಯಾಗಲಿ ಸೇರಿಸಿದ್ದಾರೆಯೆ ಅಥವಾ ಹಾಗೆ ಸೇರಿಸಿರುವ ಸಂಗತಿ ಹೇಳುವ ವಿಷಯಕ್ಕೆ ಸಂಬಂಧಿಸಿದ್ದೇ ಆಗಿದೆಯೇ ಎಂಬುದನ್ನು ಸರಿಯಾಗಿ ಪರಿಶೀಲಿಸಬೇಕು. ಒಂದಕ್ಕೊಂದು ತಾಳೆಯಾಗದೆ ಇದ್ದಾಗ ಲೇಖಕರನ್ನು ಸಂಪರ್ಕಿಸಿ ಸರಿಪಡಿಸಿ ತರಿಸಬೇಕು.

ವ್ಯಕ್ತಿಚರಿತ್ರೆಯಂಥ ಕೃತಿಗಳು ಸಿದ್ಧವಾದ ಮೇಲೆ ಆ ವ್ಯಕ್ತಿ ನಿಧನರಾಗಿದ್ದಾರೆಂದುಕೊಳ್ಳಿ. ಆಗ ಹಸ್ತಪ್ರತಿಯಲ್ಲಿ ವರ್ತಮಾನ ಸೂಚಕ ಪದಗಳು ಭೂತಕಾಲಕ್ಕೆ ಹೋಗಬೇಕು. ಅಥವಾ ಕೃತಿ ಸಿದ್ಧವಾದ ಕಾಲ, ಪ್ರಕಟಣೆಯ ಕಾಲದ ವ್ಯತ್ಯಾಸ ಸೂಚಿಸಿ ಈ ಅಂಶವನ್ನು ಓದುಗರ ಗಮನಕ್ಕೆ ತರಬೇಕು, ಸೃಜನ, ಸೃಜನೇತರ ಯಾವುದೇ ಹಸ್ತಪ್ರತಿಯನ್ನೂ ಔಚಿತ್ಯ ನೋಡಿಕೊಂಡು ಎಡಿಟ್ ಮಾಡಬೇಕಾಗುತ್ತದೆ.

"ಹೀಗೆ ಹೇಳುವುದು ಅತಿಶಯೋಕ್ತಿಯಲ್ಲ ಎಂದು ಭಾವಿಸಿ ಘಂಟಾಘೋಷವಾಗಿ ಹೇಳಲು ಸಂತೋಷಿಸುತ್ತೇನೆ" ಯಂಥ ವಾಕ್ಯಗಳನ್ನು ಸರಳವಾಗಿ ಏನು ಹೇಳಬೇಕೊ ಅದನ್ನು ನೇರವಾಗಿ ಹಾಗೇ ಹೇಳಿಬಿಡುವಂತೆ ಪರಿವರ್ತಿಸುವುದೊಳಿತು. ಕೆಲವೊಮ್ಮೆ ಕೃತಿಯಲ್ಲೇ ಹೆಸರುಗಳು, ಕ್ರಿಯೆಯ ಪುನರಾವರ್ತನೆಗಳಿರುತ್ತವೆ. ಒಂದು ಕಥೆಯ ನಾಯಕಿ ಒಂದು ಕಡೆ 'ವಿನುತ' ಆದರೆ ಇನ್ನೊಂದು ಕಡೆ 'ಸವಿತ' ಆಗಿರಬಹುದು. 'ರಮೇಶ'ನೇ 'ಸುರೇಶ'ನಾಗಿರಬಹುದು. ಬರವಣಿಗೆಯೇ ವೃತ್ತಿಯಾದ ತ.ರಾ.ಸು., ಅನಕೃರಂಥ ಪ್ರಸಿದ್ಧ ಲೇಖಕರು ಪತ್ರಿಕೆ, ಪ್ರಕಾಶನಗಳಿಗೆಂದು ಒಂದೇ ಸಮಯದಲ್ಲಿ ೩-೪ ಕತೆ ಕಾದಂಬರಿಗಳನ್ನು ಸಿದ್ಧಪಡಿಸುವ ಅನಿವಾರ್ಯ ಸಂದರ್ಭಗಳಲ್ಲಿ ಅಲ್ಲಿಯ ನಾಯಕಿಯ ಹೆಸರು ಇಲ್ಲಿಗೂ ಇಲ್ಲಿಯದು ಅಲ್ಲಿಗೂ ಹೋಗಿ ಅಭಾಸವಾಗಿರುವ ಪ್ರಸಂಗಗಳಿವೆ. ಇಂಥ ಕಡೆ ಹಸ್ತಪ್ರತಿ ಸಿದ್ಧಪಡಿಸುವ ತಜ್ಞರ ಸಮಿತಿ ಹೆಚ್ಚು ಗಮನವಿಟ್ಟು ಪರಿಶೀಲಿಸಬೇಕು.

ಕೆ.ಡಿ. ಕುರ್ತಕೋಟಿಯವರು ರಾವ್‌ಬಹದ್ದೂರರ 'ಗ್ರಾಮಾಯಣ'ವನ್ನು ತಿದ್ದಿ ಬರೆದ ಉದಾಹರಣೆಯಿದೆ. ಕಳೆದೇ ಹೋಗಿದ್ದ, ಎಂ.ಕೆ. ಇಂದಿರಾ ಅವರ ಮೊದಲ ಕಾದಂಬರಿ 'ತುಂಗಭದ್ರಾ' ಮರುರಚನೆ ಆದದ್ದು ನಮ್ಮೆದಿರಿಗುವ ಉದಾಹರಣೆಗಳು. ಬರಹದಲ್ಲಿ ಅತಿಯಾದ ವಿಶೇಷಣಗಳು ಸೇರಿಬಿಡುತ್ತವೆ. ಯಾವ ವ್ಯಕ್ತಿ, ಪಾತ್ರ, ಆ ಪಾತ್ರದ ಸ್ಥಾನ ಮರ್ಯಾದೆ ಏನೆಂದು ಗಮನದಲ್ಲಿಡದೆ ಅತಿರಂಜಿತ ವಿಶೇಷಣಗಳ ಅಬ್ಬರವಿದ್ದಾಗ ಅವನ್ನು ನಿವಾರಿಸಿಕೊಳ್ಳಬೇಕಾಗುತ್ತದೆ. ಭಾಷೆಯೂ ಸಹ ಆಯಾ ಪಾತ್ರದ ಸ್ಥಾನಮಾನದ ಹಿನ್ನೆಲೆಯಲ್ಲಿ ಬಳಕೆಯಾಗಿರಬೇಕು. ಎಲ್ಲಿ ಸರಳ, ಎಲ್ಲ ಆಡಂಬರ ಎಂಬುದು ಔಚಿತ್ಯವನ್ನಾಧರಿಸಿದ್ದಾಗಿದೆ. ಕೃತಿ ರಚನೆಯಲ್ಲಿ ಬರಹದ ಶೈಲಿ ಸಹ ವಿಷಯವನ್ನಾಧರಿಸಿಯೇ ಇರುತ್ತದೆ.

ವಿಷಯ ಐತಿಹಾಸಿಕವಾದಾಗ, ಸಾಮಾಜಿಕವಾದಾಗ ನಿರೂಪಣಾ ವಿಧಾನ, ಭಾಷೆ ಬೇರೆ ಬೇರೆ ಇರಲೇಬೇಕಲ್ಲವೆ? ಅದೇ ರೀತಿ ತಾತ್ತ್ವಿಕ, ವೈಜ್ಞಾನಿಕ ಸಂಶೋಧನೆ ಇತ್ಯಾದಿಗಳಲ್ಲೂ ಈ ಶೈಲಿಯ ಬಗ್ಗೆ ಎಚ್ಚರವಿರಲಿ. ಸಾಮಾನ್ಯವಾಗಿ ಲೇಖಕರಿಗೆ ಇದರ ಬಗ್ಗೆ ಗಮನ ಇರುತ್ತದೆ. ತುಂಬ ಹೊಸಬರಾದಾಗ ಇಂಥ ಸಮಸ್ಯೆ ಎದುರಾಗಬಹುದು.

ಇನ್ನು ಬರಹದಲ್ಲಿ ಅತ್ಯಗತ್ಯವಾಗಿ ಗಮನಿಸಬೇಕಾದ ಚಿಹ್ನೆಗಳು, (ಪಂಕ್ಚುಯೇಷನ್). ಎಲ್ಲಿ ಅಲ್ಪವಿರಾಮ, ಎಲ್ಲಿ ಪೂರ್ಣವಿರಾಮ, ಪ್ರಶ್ನಾರ್ಥಕ, ಆಶ್ಚರ್ಯಸೂಚಕ ಮೊದಲಾದವು ತುಂಬ ಸೂಕ್ಷ್ಮವಾಗಿ ನೋಡಬೇಕಾದ ಸಂಗತಿ. ಉಲ್ಲೇಖವಾದಾಗ " ಈ ಚಿಹ್ನೆ ಎಲ್ಲಿ ಪ್ರಾರಂಭ, ಎಲ್ಲಿ ಕೊನೆ ಎಂಬುದನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಒಂದೆಡೆ ಎರಡು "–ಒಂದೆಡೆ ಒಂದೇ '– ಚಿಹ್ನೆ ಇರುತ್ತದೆ. ಇವನ್ನೆಲ್ಲ ಗಮನಿಸಿ ಸೂಕ್ತವಾದ್ದನ್ನು ಬಳಸಬೇಕು. ಪ್ರಾರಂಭ, ಮುಕ್ತಾಯ ಸರಿಯಾಗಿದೆಯೇ ಗಮನಿಸಬೇಕು. ಕೆಲವೊಮ್ಮೆ ಅತಿ ಹೆಚ್ಚು ಸಾಲುಗಳ ಉಲ್ಲೇಖ ಎಂದರೆ ೨, ೩ ಪ್ಯಾರಾ ಇರುವುದುಂಟು. ಆಗ ಪ್ಯಾರಾದ ಮೊದಲಿಗೆ ಆರಂಭ ಆಗುವ ಈ " ಚಿಹ್ನೆ, ಆ ಪ್ಯಾರಾ ಮುಗಿದು, ಮತ್ತೊಂದು ಪ್ಯಾರಾದಲ್ಲೂ ಮುಂದುವರಿದಾಗ ಮತ್ತೆ ಪ್ಯಾರಾ ಆರಂಭದಲ್ಲಿ ಅದೇ ಚಿಹ್ನೆ ಬಳಸಬೇಕು. ಮುಕ್ತಾಯದಲ್ಲಿ ಮಾತ್ರ ಉಲ್ಲೇಖ ಅಂತಿಮಗೊಂಡುದರ ಸಂಕೇತವಾಗಿ " ಚಿಹ್ನೆಯನ್ನು ಬಳಸಬೇಕು. ಉಲ್ಲೇಖ ಪೂರ್ಣವಾಗದಿದ್ದರೆ ಪ್ಯಾರಾದ ಕೊನೆಯಲ್ಲಿ " ಚಿಹ್ನೆ ಇರಕೂಡದು.

ಮುಖ್ಯವಾಗಿ ಇಷ್ಟು ದೊಡ್ಡ ಉಲ್ಲೇಖ ಇದ್ದಾಗ ಅದಕ್ಕೆ ಮೂಲ ಲೇಖಕರ ಅನುಮತಿ ಪಡೆದಿರಬೇಕು. ಸಾಮಾನ್ಯವಾಗಿ ೬–೭ ಸಾಲಿಗಿಂತ ಹೆಚ್ಚು ಉಲ್ಲೇಖವನ್ನು ಸಂಬಂಧಿಸಿದವರ ಅನುಮತಿ ಇಲ್ಲದೆ ಬಳಸಕೂಡದು. ಭಾರತೀಯ ಸಂದರ್ಭದಲ್ಲಿ ಈ ನಿಯಮ ಅಷ್ಟೇನೂ ಸರಿಯಾಗಿ ಬಳಕೆ ಆಗುತ್ತಿಲ್ಲ. ಆದರೆ ತಿಳಿದವರು ಯಾರಾದರೂ ಆಕ್ಷೇಪ ಎತ್ತಿದರೆ ತೊಂದರೆ ಖಂಡಿತ. ಯಾವುದೇ ವ್ಯಕ್ತಿ, ಘಟನೆ, ಉಲ್ಲೇಖಗಳಾದಾಗ ಅದಕ್ಕೊಂದು ಗೊತ್ತಾದ ಸಂಕೇತ ಅಥವಾ ಸಂಖ್ಯೆ ಅದರ ತಲೆಯ ಮೇಲೆ ಚಿಕ್ಕ ಅಕ್ಷರದಲ್ಲಿ ಕೊಡಬೇಕು. [*, (1) (೧)] ಅದೇ ಪುಟದ ಅಡಿಯಲ್ಲಿ ಸರಿಯಾಗಿ ಈಗಾಗಲೇ ಕೊಟ್ಟಿರುವ ಚಿಹ್ನೆ–ಸಂಖ್ಯೆ ತೋರಿಸಿ ಸಂಬಂಧಿಸಿದ ವಿವರಣೆ ಕೊಡಬೇಕು. ವ್ಯಕ್ತಿ, ಘಟನೆಗಳಾದರೆ ಆ ಕೃತಿ ಕುರಿತು ಕೊಟ್ಟ ವಿವರಣೆ. ಉಲ್ಲೇಖಕ್ಕೆ ಯಾವುದಾದರೂ ಗ್ರಂಥ ಆಧಾರವಾದರೆ ಸಣ್ಣ ಅಕ್ಷರದಲ್ಲಿ ಕೃತಿಯ ಹೆಸರು, ಪುಟಸಂಖ್ಯೆ, ಲೇಖಕರು, ಪ್ರಕಾಶಕರು, ಪ್ರಕಟಿತ ವರ್ಷ ಇತ್ಯಾದಿ ವಿವರಗಳನ್ನು ತಿಳಿಸಬೇಕು. ಇದು ಆಯಾ ಪುಟದಲ್ಲಿ ಅಥವಾ ಲೇಖನದ ಕೃತಿಯ ಕೊನೆಯಲ್ಲಿ ಕೊಡಬೇಕು.

ಹಸ್ತಪ್ರತಿಯನ್ನು ಹಾಳೆಯ ಒಂದೇ ಮಗ್ಗುಲಿನಲ್ಲಿ ಪ್ರತಿ ಮಾಡಿರುವುದು ಮುಖ್ಯ. ಪ್ರತಿ ಪುಟದಲ್ಲೂ ಸಾಲುಗಳ ಪ್ರಾರಂಭಕ್ಕೆ ಮೊದಲು ಸಾಕಷ್ಟು ಸ್ಥಳ ಬಿಡಬೇಕು (ಮಾರ್ಜಿನ್). ಪ್ರತಿಯೊಂದು ಸಾಲಿನ ಮಧ್ಯೆ ಸ್ಥಳ ಹೆಚ್ಚಿಗೆ ಬಿಟ್ಟರೆ ಒಳಿತು. ಪರಿಶೀಲಿಸಿದಾಗ ಏನಾದರೂ ಸೇರಬೇಕಾದ್ದಿದ್ದರೆ ಹೀಗೆ ಸ್ಥಳಾವಕಾಶವಿದ್ದರೆ ಸೇರಿಸಲು ಅನುಕೂಲ. ಕೆಲವರು ಹಿರಿಯರು ಪರಿಸರ ಕಾಳಜಿಯಿಂದಾಗಿ ಕಾಗದವನ್ನು ದುಂದುವೆಚ್ಚ ಮಾಡಲು ಇಷ್ಟಪಡುವುದಿಲ್ಲ. ಈ ಮಿತವ್ಯಯದ ಕಾರಣ ತಮಗೆ ಬಂದ ಬಣ್ಣಬಣ್ಣದ ಕರಪತ್ರಗಳು, ಮುದ್ರಿತ ಹಾಳೆಯ ಹಿಂಬದಿ, ಆಮಂತ್ರಣ ಪತ್ರಿಕೆಗಳ ಹಿಂಬದಿ, ಅಂಚೆಯಲ್ಲಿ ಬಂದ ಕವರ್‌ಗಳಲ್ಲಿರುವ ಖಾಲಿಸ್ಥಳ ಇಂಥಲ್ಲೆಲ್ಲ ಬರೆದು ಒಂದು ಗುಚ್ಛಮಾಡಿ ಕೊಟ್ಟು ಬಿಡುತ್ತಾರೆ. ಪರಿಸರ ಕಾಳಜಿ, ವ್ಯರ್ಥವಾಗದ ಹಾಗೆ ಬಳಸುವ ವಿಧಾನ ಸ್ವಾಗತಾರ್ಹವೇ. ಆದರೆ ಇವನ್ನೆಲ್ಲ ಅವರು Notes ಇತ್ಯಾದಿಗೆ ಬಳಸಿ ಮುದ್ರಣಾಲಯಕ್ಕೆ ಕೊಡುವ ಹಸ್ತಪ್ರತಿ ವಿಷಯದಲ್ಲಿ ಕೊಂಚ ಉದಾರವಾಗುವುದೊಳಿತು.

ಇನ್ನೂ ಹಸ್ತಪ್ರತಿಯಲ್ಲೇ ಯಾವುದೋ ಪದ, ಸಾಲಿಗೆ ಒತ್ತು ಕೊಡಬೇಕೆಂಬುದನ್ನು (Bold), ಸಾಮಾನ್ಯ ಅಕ್ಷರಕ್ಕಿಂತ ಬೇರೆ ಅಕ್ಷರ ಬಳಸಬೇಕೆಂದು ಗುರುತು ಮಾಡಿರಬೇಕು ಕೆಲವೊಮ್ಮೆ ಗೊತ್ತಾದ ವಿನ್ಯಾಸದಲ್ಲಿ ಜೋಡಣೆಯ ಸಾಲುಗಳಿಗಿಂತ ಒಳಕ್ಕೆ ಕೆಲವು ಸಾಲುಗಳನ್ನು ತೆಗೆದುಕೊಳ್ಳಬೇಕಿದ್ದರೆ (ಇದನ್ನು ಇಂಡೆಂಟ್ ಅನ್ನುತ್ತಾರೆ) ಅದನ್ನೂ ಸೂಚಿಸಿರಬೇಕು.

ಈಚೆಗೆ ಎಲ್ಲ ಕಡೆ ಗಣಕಯಂತ್ರಗಳು ಬಂದಿವೆ. ಎಲ್ಲ ಲೇಖಕರು ಡಿ.ಟಿ.ಪಿ. ಪ್ರತಿಯನ್ನು ತಾವೇ ಸಿದ್ಧಮಾಡಿಕೊಡುವುದರಿಂದ ಪ್ರಕಾಶಕರು ಅದು ಇದ್ದ ಹಾಗೇ ಅಚ್ಚಾಗಿ ಬಿಡಬಹುದು ಎಂಬ ಭ್ರಮೆಯಲ್ಲಿರುತ್ತಾರೆ. ಹಾಗಾಗುವುದಿಲ್ಲ. ಅವರು ಅದನ್ನೂ ಸರಿಯಾಗಿ ಓದಿ ತಪ್ಪುಗಳನ್ನು ತಿದ್ದಿರಬೇಕು ಮತ್ತು ಮೇಲೆ ಹೇಳಿದ



ಸೂಚನೆಗಳನ್ನು ಗಮನಿಸಿ ಸೂಚಿಸಬೇಕು. ಇಲ್ಲವೇ ಅವರೇ ಪರಿಣತರಾದರೆ ಅದನ್ನೂ ಸರಿಪಡಿಸಿ ಕಳಿಸಬೇಕು. ಇಷ್ಟಾದರೂ ಮುದ್ರಕರಿಗೆ ಅವರದೇ ಆದ ಮುದ್ರಣ ವಿನ್ಯಾಸದ ನಿಯಮಗಳಿವೆ. ಇವರೇನು ಮಾಡಿದ್ದರೂ ಸೂಚಿಸಿದ ಆಕಾರಕ್ಕೆ ಪುಟ ವಿನ್ಯಾಸ ಮಾಡಬೇಕಾಗುತ್ತದೆ. ಅದು ೧/೪ ಕ್ರೌನ್, ಡೆಮಿ ಅಥವಾ ೧/೮ ಕ್ರೌನ್, ಡೆಮಿ ಅಥವಾ ಇನ್ನಾವುದೇ ಬೇರೆ ಬೇರೆ ಅಳತೆ ಆಕಾರಕ್ಕೆ ಹೊಂದುವಂತೆ ಇರಬೇಕು. ಇವಕ್ಕೆಲ್ಲ ಪುಟಕ್ಕೆ ಇಂತಿಷ್ಟು ಸಾಲುಗಳು, ಇಷ್ಟೇ ಮಾರ್ಜಿನ್ ಇತ್ಯಾದಿ ನಿಯಮಗಳಿವೆ. ಅದರಂತೆ ಹೊಂದಿಸಿಕೊಳ್ಳುವ ಪೇಜ್‌ಮೇಕಪ್ ಕೆಲಸ ಇತ್ಯಾದಿ ಇದ್ದೇ ಇರುತ್ತದೆ. ಮುದ್ರಕರ ನಿಯಮಗಳನ್ನು, ವಿನ್ಯಾಸ ವಿಧಾನಗಳನ್ನು ಇಲ್ಲಿ ವಿವರಿಸಲು ಹೋಗುತ್ತಿಲ್ಲ. ಆದರೆ ಪ್ರಕಾಶಕರು ಅಥವಾ ಅವರ ಪರವಾಗಿ ಕರಡು ತಿದ್ದುವವರು ಗಮನಿಸಲೇಬೇಕಾದ ಕೆಲವು ಮುಖ್ಯಾಂಶಗಳನ್ನು ಇಲ್ಲಿ ಸೂಚಿಸಬಯಸುತ್ತೇನೆ.

ಪ್ರತಿ ಪುಟದ ಸಂಖ್ಯೆ ಸರಿಯಾಗಿದೆಯೆ? ಅದು ಕನ್ನಡ ಅಂಕಿಗಳೇ, ಇಂಗ್ಲಿಷ್ ಅಂಕಿಗಳೇ? ರೋಮನ್ ಅಂಕಿಗಳೇ ಎಂಬುದನ್ನು ಗಮನಿಸಬೇಕು. ಇನ್ನು ಪ್ರತಿ ಪುಟದ (ಫೋಲಿಯೊ) ಕೊನೆಯಲ್ಲಿ ಕೃತಿಯ ಹೆಸರು ಇತ್ಯಾದಿ ಸಣ್ಣ ಅಕ್ಷರದಲ್ಲಿ ಇದೆಯೇ? ಅವು ಏಕರೂಪದಲ್ಲಿವೆಯೇ, ಅಧ್ಯಾಯಗಳಾದಲ್ಲಿ ಅವುಗಳ ಸಂಖ್ಯೆ ಮತ್ತು ಒತ್ತು ಅಥವಾ ಸಹಜ (Bold or Normal)ವೇ ಎಂಬುದನ್ನು ಗಮನಿಸಬೇಕು.

ಪ್ರತಿ ಪುಟದ ಕೊನೆಯಲ್ಲಿ ಪ್ಯಾರಾದ ಪ್ರಾರಂಭ ಅಥವಾ ಅರ್ಧಸಾಲು ಇರಬಾರದು. ಹಾಗೆ ಅಂತ್ಯದಲ್ಲೂ ಇರಬಾರದು. ಮುಖ್ಯವಾಗಿ ಸಾಧ್ಯವಾದಷ್ಟು ಹಿಂದಿನ ಪುಟದ ಸಾಲುಗಳ ಮೇಲೆ ಇನ್ನೊಂದು ಪುಟದ ಸಾಲು ಕೂತಿರಬೇಕು. ಈಚೆಗೆ ಪುಟದ ಅಂದಕ್ಕಾಗಿ ಖಾಲಿ ಸ್ಥಳ ಹೆಚ್ಚಿಗೆ ಬಿಡುವುದರಿಂದಾಗಿ ಈ ನಿಯಮ ಸರಿಯಾಗಿ ಪಾಲನೆ ಆಗುತ್ತಿಲ್ಲ. ಇಂದು ಅವರವರ ಇಷ್ಟಾನುಸಾರ ಪುಟ ವಿನ್ಯಾಸ ಆಗುತ್ತಿದೆ. ಪ್ರತಿ ಅಧ್ಯಾಯ ಅಥವಾ ಹೊಸ ಕಥೆಯ ಶೀರ್ಷಿಕೆಯ ಪುಟದಲ್ಲಿ ಎಷ್ಟು ಸ್ಥಳ ಬಿಡಬೇಕೆಂಬ ಬಗ್ಗೆ ಗಮನ ಇರಬೇಕು. ಅದೇ ರೀತಿ ಇತರ ಪ್ರಾರಂಭದ ಪುಟಗಳೂ ಮೂಡಿಬರಬೇಕು. ಕೆಲವೊಮ್ಮೆ ಆರಂಭದ ಅಕ್ಷರ (ಡ್ರಾಪ್‌ಲೇಟರ್)ಕ್ಕೆ ಒತ್ತು (Bold) ಇರುತ್ತದೆ. ಇನ್ನೂ ಸಾಲುಗಳ ಆರಂಭ-ಕೊನೆಯಲ್ಲಿ ಪದಗಳು ಒಡೆದು ಅರ್ಥ ಕೆಡಬಾರದು. ಎಂದರೆ 'ಕೊನೆ' ಒಂದು ಕಡೆಯಾಗಿ ' ' ಇನ್ನೊಂದು ಕಡೆ 'ಯ ಸಾಲು' ಬರಬಾರದು. ಹಾಗೆಂದು ಸಾಲುಗಳ ಮಧ್ಯೆ ವಿಪರೀತ ಸ್ಥಳವೂ ಬಿಡಬಾರದು. ಯಾವುದು ಪೂರ್ಣಪದ (one word) ಯಾವುದು ಒಡೆದರೂ ಅಡ್ಡಿ ಇಲ್ಲ ನೋಡಿ ಸರಿಪಡಿಸಬೇಕು. ಇಂಥ ಅನೇಕ ಸಂದರ್ಭಗಳಲ್ಲಿ ಸಾಲುಗಳ ನಡುವೆ ಹೆಚ್ಚು ಸ್ಥಳ ಉಳಿವಂತಾದರೆ ಮತ್ತು ಹಾಗೂ, ಅಥವಾ ಮೊದಲಾದವನ್ನು ಸೇರಿಸಿಯೋ ಸಂಯುಕ್ತವಾಗಿರುವ ಪದವೊಂದನ್ನು ಅರ್ಥ ಕೆಡದಂತೆ ಎರಡು ಪದವಾಗಿ ವಿಂಗಡಿಸಿಯೋ ಇಡುವುದು ಒಳಿತು.
ಕಂಸಗಳನ್ನು (ಬ್ರಾಕೆಟ್) ಬಳಸುವಾಗ ಎಚ್ಚರವಿರಬೇಕು. ಆರಂಭವಾದದ್ದು ಮುಕ್ತಾಯವೂ ಸರಿಯಾಗುವಂತೆ ನೋಡಬೇಕು. ಕೆಲವು ಸಂದರ್ಭಗಳಲ್ಲಿ ಎಂದರೆ ಒಂದು ವಾಕ್ಯ ಕಂಸಿನಲ್ಲಿ ಸೇರುತ್ತಿರುವಾಗಲೇ ಇಸವಿ ಅಥವಾ ವ್ಯಕ್ತಿ, ಸಂಸ್ಥೆಯ ಹೆಸರು ಮತ್ತೊಂದು ಕಂಸಿನಲ್ಲಿ ಸೇರಬೇಕಾಗಬಹುದು ಆಗಲೂ ಮೊದಲು ಬಳಸಿದ ಕಂಸ '{' ' ] 'ಹೀಗಿದ್ದು ಒಳಗಿನದು' ( ) ಹೀಗಿರಬೇಕಾಗುತ್ತದೆ.

ಚಿತ್ರಗಳನ್ನು ಬಳಸುವುದಾದಲ್ಲಿ ಅವು ಕಲಾವಿದ ಬರೆದವು, ಛಾಯಾಚಿತ್ರಗಳು ಯಾವುದೇ ಆಗಿರಲಿ ಅವನ್ನು ಸರಿಯಾಗಿ ವಿನ್ಯಾಸಗೊಳಿಸಬೇಕು. ವಿನ್ಯಾಸದಲ್ಲಿ ಉಳಿತಾಯವೇ ಪ್ರಧಾನವಾಗದೆ ಚಿತ್ರ, ಪಠ್ಯಗಳ ಮಧ್ಯೆ ಸಾಕಷ್ಟು ಖಾಲಿ ಸ್ಥಳ ಬಿಟ್ಟು ಪುಟವನ್ನು ಸುಂದರವಾಗಿರುವಂತೆ ನೋಡಿಕೊಳ್ಳಬೇಕಾಗುತ್ತದೆ.

ಪುಸ್ತಕವೊಂದರ ಪ್ರಕಟಣೆಯಲ್ಲಿ ಕೆಲವು ನಿಯಮಗಳಿವೆ. ಪ್ರಾರಂಭದ ಪುಟಗಳಲ್ಲಿ ಆ ನಿಯಮಗಳು ಕಡ್ಡಾಯ. ಶೀರ್ಷಿಕೆ ಪುಟ, ಅದರ ಹಿಂಬದಿ ಪುಟದಲ್ಲಿ ಬರಲೇಬೇಕಾದ ಮಾಹಿತಿ (ಇಂಗ್ಲಿಷ್ ಹಾಗೂ ಕನ್ನಡದಲ್ಲಿ), ಹಕ್ಕುಗಳು,

ಪುಟಗಳು, ಬೆಲೆ, ವಿನ್ಯಾಸಕಾರರ ವಿವರ, ನಾಟಕ ಕೃತಿಯಾದರೆ ಪ್ರದರ್ಶಿಸುವವರಿಗೆ ಸೂಚನೆ, ಸಾಹಿತ್ಯ, ಚಿತ್ರಗಳನ್ನು ನಕಲು ಮಾಡುವವರ ಮೇಲೆ ಕಾನೂನುಕ್ರಮದ ಎಚ್ಚರಿಕೆ ಇತ್ಯಾದಿಗಳನ್ನು ಸರಿಯಾಗಿ ಛಾಪಿಸಬೇಕು. ಇಂಥಲ್ಲಿ ಮುದ್ರಕರು ನೆರವಿಗೆ ಬರುತ್ತಾರಾದರೂ ಪ್ರಕಾಶಕರು ಗಮನಿಸಬೇಕಾದ್ದು ತುಂಬ ಮುಖ್ಯ. ಮುನ್ನುಡಿ, ಪ್ರಕಾಶಕರ ನುಡಿ, ಲೇಖಕರ ನುಡಿ, ಅರ್ಪಣೆ, ಪರಿವಿಡಿ ಇತ್ಯಾದಿಗಳನ್ನು ಸರಿಯಾಗಿ ನೋಡಬೇಕು. ಗ್ರಂಥದ ಕೊನೆಯಲ್ಲಿ ಅನುಬಂಧಗಳಿದ್ದರೆ ಸರಿಯಾಗಿ ಸೇರಿಸಬೇಕು. ಕ್ಲಿಷ್ಟ ಪದಗಳು ಅಥವಾ ಪ್ರಾದೇಶಿಕ ವಿಶೇಷ ಪದಗಳ ಅರ್ಥವನ್ನು ಅಗತ್ಯವಿದ್ದಲ್ಲಿ ಕೊಡಬೇಕಾಗುತ್ತದೆ.

ಕೆಲವು ಲೇಖನಗಳ, ಕತೆಗಳ ಸಂಕಲನವಾದಾಗ, ಮತ್ತು ಕೆಲವರು ಸೇರಿ ಅಥವಾ ಒಬ್ಬರೇ ಕೃತಿಯನ್ನು ಸಂಪಾದನೆ ಮಾಡುವಾಗಲೂ ಈಗಾಗಲೇ ಹೇಳಿರುವ ಎಲ್ಲ ಸಂಗತಿಗಳೂ ಗಮನದಲ್ಲಿರಬೇಕಲ್ಲದೆ, ಇನ್ನೂ ಕೆಲವಂಶಗಳು ಸೇರುತ್ತವೆ. ಅಂಥಲ್ಲಿ ಪ್ರಧಾನ ಸಂಪಾದರು, ಸಂಪಾದಕ ಮಂಡಳಿ, ಸಲಹಾಮಂಡಳಿ ಮೊದಲಾದ ಸಿದ್ಧತೆಗಳಿರುತ್ತವೆ. ಬಹುಮಂದಿ ಲೇಖಕರಿಂದ ಬರೆಸುವ ಗ್ರಂಥ ಇತ್ಯಾದಿಗಳಾದಾಗ ಗೌರವಧನ, ಅನುಮತಿ, ಸಂಪಾದಕರೊಂದಿಗೆ ಒಪ್ಪಂದ ಮೊದಲಾಗಿ ಎಲ್ಲವೂ ನಿಯಮಬದ್ಧವಾಗಿರಬೇಕು.

ಇನ್ನೂ ಕೆಲವು ವಿಶೇಷ ವಿಷಯಗಳಾದಾಗ ಉದಾ ನಿಘಂಟು, ಸಂಗೀತ, ನೃತ್ಯ, ವಿಜ್ಞಾನ, ಬೇರೆ ಬೇರೆ ತಾಂತ್ರಿಕ ವಿಷಯಗಳನ್ನು ಕುರಿತ ಕೃತಿಗಳಾದಾಗ ಬಹಳ ಎಚ್ಚರಿಕೆಯಿಂದ ಆಯಾ ತಜ್ಞರೊಂದಿಗೆ ಸಮಾಲೋಚಿಸಬೇಕು. ಸೃಜನಶೀಲ ಕೃತಿಯಾದಾಗ ಆಯಾ ಪ್ರದೇಶದ ಭಾಷೆಯನ್ನೇ ಬಳಸುವುದು ಆಯಾ ಲೇಖಕರಿಗೆ ಸೇರಿದ ಸಂಗತಿ. ವಿಮರ್ಶೆ, ಸಂಶೋಧನೆ ಮೊದಲಾದ ಕೃತಿಗಳಿಗೆ ಭಾಷೆಯಲ್ಲಿ ಒಂದು ಏಕರೂಪತೆ ಇರಬೇಕೇ ಎಂಬುದು ಗಂಭೀರವಾದ ಚರ್ಚೆಗೆ ಒಳಗಾಗಬೇಕಾದ ಸಂಗತಿ, ಹಿಂದಿನವರೆಲ್ಲ ಈ ಬಗ್ಗೆ ಸಾಕಷ್ಟು ಚರ್ಚಿಸಿದ್ದಾರೆ. ಒಟ್ಟಾರೆ ಸರಳವಾಗಿ ಸಂವಹನವಾಗುವುದು ಮುಖ್ಯ. ಪ್ರಾಚೀನ ಶಾಸ್ತ್ರಗ್ರಂಥಗಳು ಮುಖ್ಯವಾಗಿ ಶಾಸನ, ಓಲೆಗರಿ ಮುಂತಾದವುಗಳಿಂದ ಪ್ರತಿ ಎತ್ತಿ, ಪರಿಷ್ಕರಿಸಿ ಗ್ರಂಥ ಸಂಪಾದನೆ ಮಾಡುವುದು ಬೇರೆಯದೇ ಆದ ಶಾಸ್ತ್ರ. ಇದನ್ನು ತಜ್ಞರು ಮಾತ್ರ ನಿರ್ವಹಿಸಬಲ್ಲರು. ಈ ಕುರಿತು ವಿಶೇಷ ಅಧ್ಯಯನಮಾರ್ಗಗಳೇ ಇವೆ. ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಗಳು ಈ ಕುರಿತ ಒಂದು ಹೊತ್ತಿಗೆಯನ್ನೇ ಪ್ರಕಟಿಸಿದ್ದಾರೆ. ಬಿ.ಎಂ.ಶ್ರೀ. ಪ್ರತಿಷ್ಠಾನ ಇದನ್ನು ಪ್ರಕಟಿಸಿದೆ. ಆಸಕ್ತರು ಗಮನಿಸಬಹುದು.

ಈವರೆಗೆ ಹೇಳಿರುವ ಸಂಗತಿಗಳು ತೀರಾ ಪ್ರಾಥಮಿಕ ಸಿದ್ಧತೆಗಳು ಮಾತ್ರ. ಆದರೆ ಅನಿವಾರ್ಯ, ಅತ್ಯಗತ್ಯ ಅಂಶಗಳು. ಕೃತಿಯೊಂದನ್ನು ಸುಂದರವಾಗಿ ಪ್ರಕಟಿಸುವುದೂ ಒಂದು ಕಲೆ, ಇದರಾಚೆಗಿನ ಇನ್ನೂ ಅನೇಕ ಅಧ್ಯಯನಯೋಗ್ಯ ವಿಷಯಗಳಿಗೆ ಹೆಚ್ಚಿನ ಅಭ್ಯಾಸದ ಅಗತ್ಯವಂತೂ ಇದೆ. ಮುದ್ರಣಾಲಯಕ್ಕೆ ಸರಿಯಾದ ಹಸ್ತಪ್ರತಿ ಮತ್ತು ಅದರಲ್ಲಿ ಆಗಬೇಕಾದ ತಿದ್ದುಪಡಿ, ಸೇರ್ಪಡೆ ಇತ್ಯಾದಿಗಳನ್ನು ಸೂಚಿಸದೆ, ಕರಡು ತಿದ್ದುವಲ್ಲಿ ಎಚ್ಚರವಹಿಸದೆ ಅನಂತರ ಕಾಣುವ ಎಲ್ಲ ದೋಷಗಳಿಗೂ ಮುದ್ರಕರನ್ನೇ ಹೊಣೆ ಮಾಡುವುದು ತಪ್ಪು.

ಒಮ್ಮೆ ಮಾಸ್ತಿವೆಂಕಟೇಶ ಅಯ್ಯಂಗಾರ್ ಅವರು ನಮ್ಮ ಇಳಾ ಮುದ್ರಣಕ್ಕೆ ಒಂದು ಹಸ್ತಪ್ರತಿ ತಂದು ಮುದ್ರಿಸಲು ಹೇಳಿದರು. ಆ ಮೊದಲೇ ನಮ್ಮ ಬಗ್ಗೆ ಆ ವೇಳೆಗಾಗಲೇ ನಮ್ಮೊಂದಿಗೆ ಸಂಪರ್ಕದಲ್ಲಿದ್ದ ಹಿರಿಯ ಸಾಹಿತಿಗಳ ಅಭಿಪ್ರಾಯಗಳನ್ನು ಪಡೆದೇ ಬಂದಿದ್ದರು. ಅದೊಂದು ಸಂಸ್ಕೃತ ಶ್ಲೋಕಗಳೇ ಹೆಚ್ಚಿಗೆ ಇದ್ದ ಕೃತಿ. ನೀಲಿಯ ಒತ್ತುಗೆರೆಗಳಿದ್ದ ನೀಲಿ ಬಣ್ಣದ ಕಾಗದದ ಮೇಲೆ ನೀಲಿ ಇಂಕಿನಲ್ಲೇ ಬರೆದಿದ್ದರು. ಲೇಖಕರ ಅಕ್ಷರ ಶೈಲಿಯು ಸಾಲುಗಳ ಮಧ್ಯೆ ನೀಲಿ ಬಣ್ಣದ ಕಾರಣದಿಂದಾಗಿ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಈ ಎಲ್ಲ ಕಾರಣ ಹಾಗೂ ಆಗಿನ ಮೊಳೆ ಜೋಡಿಸುವ ವಿಧಾನದಿಂದಾಗಿ ವಿಪರೀತ ಶ್ರಮ-ಸಮಯ ವ್ಯಯಿಸಿದರೂ ದೋಷಗಳು ಉಳಿಯುತ್ತಿದ್ದವು. ಮಾಸ್ತಿಯವರಿಗೆ ಕೋಪ ಬರುತ್ತಿತ್ತು. ಜೊತೆಗೆ ಪುಸ್ತಕ ಬೇಗ ಸಿದ್ಧವಾಗಬೇಕೆನ್ನುತ್ತಿದ್ದರು. ನಮ್ಮ ಕಂಪೊಸಿಟರ್ ವಿದ್ಯಾವಂತರಲ್ಲ ಅವರು ಈ ಕೆಲಸಕ್ಕೆ ಅರ್ಹರಲ್ಲ ಎಂದೂ ಹೇಳಿಬಿಟ್ಟರು. ನನಗೆ ನನ್ನ ಕೆಲಸಗಾರರನ್ನು

ಆಕ್ಷೇಪಿಸಿದರೆಂಬ ಸಿಟ್ಟು. "ವಿದ್ಯಾವಂತರಾಗಿದ್ದರೆ ಮೊಳೆ ಜೋಡಿಸಲು ಬರುತ್ತಿರಲಿಲ್ಲ, ಎಲ್ಲಾದರೂ ಗುಮಾಸ್ತರಾಗಿರುತ್ತಿದ್ದರು. ನಿಮ್ಮ ಬರಹವೇ ಸ್ಪಷ್ಟವಿಲ್ಲ" ಎಂದು ಪತ್ರ ಬರೆದು ಹಸ್ತಪ್ರತಿ ಹಿಂದಿರುಗಿಸಿಬಿಟ್ಟ. ಇಂಥ ಅನೇಕ ಪ್ರಸಂಗಗಳಿರುತ್ತವೆ.

ನಮ್ಮ ಇಳಾ ಮುದ್ರಣಾಲಯದಲ್ಲಿರುವ ಹಿರಿಯರಾದ ಮಳಲಿಗೌಡರು ತಮ್ಮ ಅನುಭವದಲ್ಲಿ ಕಂಡ ಕೆಲವರ ಬಗ್ಗೆ ಹೀಗೆ ಹೇಳುತ್ತಾರೆ:

"ನನ್ನ ಅನುಭವದಲ್ಲಿ ಒಂದೇ ಮಾತಿನಲ್ಲಿ ಹೇಳುವುದಾದರೆ ಯಾರೇ ಲೇಖಕರಾಗಲಿ ತಾವು ಬರೆದದ್ದನ್ನು ಒಮ್ಮೆ ಸಂಪೂರ್ಣವಾಗಿ ಓದಿ ಅದೇ ಹಸ್ತಪ್ರತಿಯಲ್ಲಿ ತಿದ್ದುಪಡಿ ಮಾಡಿ ಅದನ್ನು ಬೇರೆ ಪ್ರತಿ ಮಾಡಿ ಮತ್ತೊಮ್ಮೆ ಅದನ್ನು ಓದಿ ಸರಿ ಇದೆ ಎಂದು ದೃಢಪಡಿಸಿಕೊಂಡ ನಂತರ ಅದನ್ನು ಮುದ್ರಣಾಲಯಕ್ಕೆ ಕೊಟ್ಟರೆ ಅಕ್ಷರ ಜೋಡಿಸುವವರಿಗೂ ಹೆಚ್ಚು ಶ್ರಮವಿಲ್ಲದೆ ಬಹಳ ಬೇಗ ಕೆಲಸ ಮುಗಿಯುತ್ತದೆ (ಅಕ್ಷರ ಜೋಡಿಸುವವರಿಗೂ ಬಹಳ ಜವಾಬ್ದಾರಿಯುತವಾದ ಪರಿಣತಿ ಇದ್ದರೆ ಮಾತ್ರ) ಲೇಖಕರೂ ಒಂದೇ ತಿದ್ದುಪಡಿಯಲ್ಲಿ ತಿದ್ದಿ ಮುದ್ರಣಕ್ಕೆ ಆದೇಶ ನೀಡಬಹುದು". ಇಲ್ಲದಿದ್ದರೆ ಹೆಚ್ಚಿನ ತಿದ್ದುಪಡಿಯಲ್ಲಿಯೇ ಕಾಲ ವ್ಯರ್ಥವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಕೆಲವು ಉದಾಹರಣೆಗಳನ್ನು ಕೊಡಬಹುದು.

೧. **ಕರ್ನಾಟಕ ಲಾ ಜರ್ನಲ್‌ನ್ನು ಪ್ರಕಟಿಸುತ್ತಿದ್ದ ಎನ್. ಟಿ. ರಘುನಾಥನ್ (ದಿವಂಗತ) (ಸುಪ್ರೀಂ ಕೋರ್ಟ್ ಅಡ್ವೊಕೇಟ್)**
ಇವರು ಇಂಗ್ಲಿಷಿನಲ್ಲಿ ಟೈಪ್ ಮಾಡಿದ್ದ ಪ್ರತಿಯನ್ನು ಕೊಡುತ್ತಿದ್ದರು. ಅದನ್ನು ನಾವೇ (ಕಂಪಾಸಿಟರ್) ಅಕ್ಷರ ಜೋಡಣೆಯಲ್ಲಿಯೇ ಎಲ್ಲೆಲ್ಲಿ ಯಾವ ಯಾವ ಫಾಂಟ್ ಬರಬೇಕೆಂಬುದನ್ನು ನಾವೇ ತಿಳಿದು ಕಂಪೋಸ್ ಮಾಡಬೇಕು. ಎಲ್ಲೆಲ್ಲಿ ಅಬ್ರಿವಿಯೇಷನ್ ಬರಬೇಕೆಂಬುದನ್ನು ನಾವೇ ತಿಳಿದುಕೊಳ್ಳಬೇಕಾಗಿತ್ತು. ಒಟ್ಟಿನಲ್ಲಿ ಒಂದು ಅಥವಾ ಎರಡನೇ ಪ್ರೂಫ್‌ನಲ್ಲಿಯೇ ಅಪ್ರೂವ್ ಆಗುತ್ತಿತ್ತು.

೨. **ನಾಟಕ ಲೋಕದ ಪರ್ವತವಾಣಿ : (ದಿವಂಗತ)**
ನಾಟಕಗಳನ್ನು ಬರೆದರೆ ಪಾತ್ರಗಳ ಹೆಸರು ಸಂಭಾಷಣೆ ಆವರಣದಲ್ಲಿ ಬರುವ ನಿರ್ದೇಶನ ಮುಂತಾದವುಗಳನ್ನು ಬರೆದು ಮುದ್ರಣಕ್ಕೆ ಕೊಟ್ಟರೆ ಅಕ್ಷರ ಜೋಡಿಸುವವನಿಗೆ ಯಾವ ತಲೆನೋವೂ ಇರುತ್ತಿರಲಿಲ್ಲ. (ತಿಳಿವಳಿಕೆ ಇರುವವರಿಗೆ ಮಾತ್ರ)

೩. **ತಾತಾ ಕೃಷ್ಣಾಚಾರ್ : (ದಿವಂಗತ)**
ಇವರು ತಮ್ಮ ಕೈಬರವಣಿಗೆಯಲ್ಲಿ ಫುಲ್‌ಸ್ಕೇಪ್ ಪೇಜ್‌ನಲ್ಲಿ ಬರೆದರೆ ಒಂದು ಪುಟಕ್ಕೆ ಅಕ್ಷರ ಜೋಡಣೆಯಲ್ಲಿ ಕ್ರೌನ್ ೧/೮ ಆಕಾರದಲ್ಲಿ ಮೂರುವರೆ ಪುಟಗಳಾಗುತ್ತಿದ್ದವು. ಅಂದರೆ ಅಷ್ಟು ಸಣ್ಣದಾಗಿ ಅವರ ಕೈಬರಹವಿರುತ್ತಿತ್ತು. ಅವರು ಒಂದು ಸಾರಿ ಬರೆದರೆ ಆ ಪ್ರತಿಯಲ್ಲಿಯೇ ತಿದ್ದುಪಡಿ ಮಾಡಿ ಮುದ್ರಣಕ್ಕೆ ಕೊಡುತ್ತಿದ್ದರು.

೪. **ಎಂ.ವಿ. ಸೀತಾರಾಮಯ್ಯ : (ದಿವಂಗತ)**
ಅವರ ಕೈಬೆರಳುಗಳು ಮಡಿಸಿಕೊಂಡಿದ್ದರೂ ಸಹ ಅಕ್ಷರ ಬಹಳ ದುಂಡಾಗಿ ಬರೆಯುತ್ತಿದ್ದರು. ಎಂಥವರಾದರೂ ಅವರ ಅಕ್ಷರಗಳನ್ನು ಸುಲಭವಾಗಿ ಓದಬಹುದಾಗಿತ್ತು. ಮುದ್ರಣಕ್ಕೆ ಅವರು ಹಸ್ತಪ್ರತಿಯನ್ನು ಕೊಡುವಾಗಲೆ ಯಾವ ಯಾವ ಫಾಂಟ್ ಮತ್ತು ಸೈಜ್‌ನಲ್ಲಿ ಬರಬೇಕೆಂಬುದನ್ನು ನಿರ್ದೇಶನ ಕೊಡುತ್ತಿದ್ದರು.

೫. **ಚಿ. ಶ್ರೀನಿವಾಸರಾಜು : (ದಿವಂಗತ)**
ಇವರು ಮುದ್ರಣಕ್ಕೆ ಹಸ್ತಪ್ರತಿಯನ್ನು ಕೊಡಬೇಕಾದರೆ ಯಾವ ಯಾವ ಸೈಜ್‌ನಲ್ಲಿ ಅಕ್ಷರಗಳು ಬರಬೇಕೆಂಬುದನ್ನು ಹಸ್ತಪ್ರತಿಯಲ್ಲಿಯೇ ಗುರುತಿಸಿಕೊಡುತ್ತಿದ್ದರು.

೬. **ಗೌಡಗೆರೆ ಗೋಪಾಲಕೃಷ್ಣಾಚಾರ್ : (ದಿವಂಗತ)**
ಇವರು ಸಂಸ್ಕೃತ ಮಹಾವಿದ್ವಾಂಸರು. ಇವರು ತಿದ್ದುಪಡಿ ಮಾಡದ ಹಸ್ತಪ್ರತಿಯನ್ನು ನೇರವಾಗಿ ಮುದ್ರಣಕ್ಕೆ ಕೊಡುವರು. ಇವರಿಗೆ ಅಕ್ಷರ ಜೋಡಿಸಿ ಪ್ರೂಫ್ ಕೊಡುವಾಗ ಯಾವ ಸೈಜ್‌ನಲ್ಲಿ ಕೊಡುತ್ತೇವೆಯೋ ಅದರ ಜೊತೆಗೆ ಅಷ್ಟೇ ಖಾಲಿ ಇರುವ ಕಾಗದವನ್ನು ಕೊಡಬೇಕಾಗುತ್ತಿತ್ತು. ಅವರು ಮೊದಲ ಪ್ರತಿಯಲ್ಲಿ ನಾನು ತಿದ್ದುಪಡಿ ಮಾಡಲಾಗುವುದಿಲ್ಲ. ಪ್ರೂಫ್‌ನಲ್ಲೆ ನಾನು ತಿದ್ದುಪಡಿ ಮಾಡಬೇಕಾಗುತ್ತದೆ. ಅದೇ ನನಗೆ ರೂಢಿಯಾಗಿದೆ ಎಂದು ಹೇಳುತ್ತಿದ್ದರು.

೭. **ಕೊರಟ ಶ್ರೀನಿವಾಸರಾವ್ : (ದಿವಂಗತ)**
ಇವರಂತೂ ಲೇಖನಗಳ, ಕಾದಂಬರಿಗಳ ಹಸ್ತಪ್ರತಿಯನ್ನು ಬರೆಯಲು ಕೂತರೆ ಮೇಲಿನ ತುದಿಯಲ್ಲಿ ಅವರ ಲೇಖನಿ ಶುರುಮಾಡಿದರೆ ಆ ಕಾಗದದ ಕೊನೆಯಲ್ಲಿಯೇ ಲೇಖನಿ ತೆಗೆಯುತ್ತಿದ್ದರು. ಅವರ ಅಕ್ಷರ ಎಷ್ಟು ದೊಡ್ಡದಾಗಿರುತ್ತಿತ್ತೆಂದರೆ ಫುಲ್‌ಸ್ಕೇಪ್ ಸೈಜಿನಲ್ಲಿ ಎರಡೂವರೆ ಪುಟದಷ್ಟು ಅವರ ಕೈ ಬರಹವಿದ್ದರೆ ಅದು ಕ್ರೌನ್ ೧/೮ ಆಕಾರದಲ್ಲಿ ಒಂದು ಪುಟವಾಗುತ್ತಿತ್ತು. ಅವರು ಮುದ್ರಣಕ್ಕೆ ಕೊಡುವ ಮೊದಲು ಅದರ ಪ್ರತಿಯನ್ನು ಅವರ ಶ್ರೀಮತಿಯವರಾದ ಮಂಜುಳಮ್ಮ ಅವರು ದುಂಡಾದ ಅಕ್ಷರದಲ್ಲಿ ಪ್ರತಿಮಾಡಿ ಮುದ್ರಣಕ್ಕೆ ಕೊಡುತ್ತಿದ್ದರು. ನಮ್ಮ ಅವರ ಪರಿಚಯವಾದ ಮೇಲೆ ಅವರು ಪ್ರತಿಯನ್ನು ಕಾಪಿ ಮಾಡುವುದನ್ನು ನಿಲ್ಲಿಸಿದರು.

೯. ಇನ್ನು ಕೆಲವರು ಇರುತ್ತಾರೆ, ವಿದ್ಯಾಸಂಸ್ಥೆಗಳಲ್ಲಿ ಅಲ್ಲದೆ ಬೇರೆ ಸಂಸ್ಥೆಗಳಲ್ಲೂ ವಿಶೇಷ ಸಂಚಿಕೆಗಳನ್ನು ಮುದ್ರಿಸಲು ಹಲವಾರು ಜನರು ಬರೆದ ಹಸ್ತಪ್ರತಿಗಳನ್ನು ತಂದು ಮುದ್ರಣಕ್ಕೆ ಕೊಡುತ್ತಾರೆ. ಅದರ ಜವಾಬ್ದಾರಿ ವಹಿಸಿಕೊಂಡವರು ಅವುಗಳ ಪರಾಮರ್ಶೆಗೆ ಹೋಗುವುದಿಲ್ಲ. ಪ್ರೂಫ್ ಕೊಟ್ಟಾಗ ಅವರಿಗೆ ಹೇಗೆ ಹೇಗೆ ಬರಬೇಕೆಂಬುದು ಅವರ ತಲೆಗೆ ಹೋಗುತ್ತದೆ. ಅದರಲ್ಲೂ ಮುದ್ರಣಕಾರರು ಸಹಕರಿಸಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಕಾಲ ವೃಥಾ ವ್ಯರ್ಥವಾಗುತ್ತದೆ.

೧೦. ಇನ್ನು ಪತ್ರಿಕಾ ಕಾರ್ಯಾಲಯದಲ್ಲಿ ಆಗಿನ ಜನರು ಹಸ್ತಪ್ರತಿಯನ್ನು ಬರೆಯುವುದೇ ವಿಶೇಷ (ಈಗ ಗಣಕಯಂತ್ರ ಬಂದಿದೆ) ಅವರ ಅಕ್ಷರವನ್ನು ಓದಲು ಅನುಭವಸ್ತ ಅಕ್ಷರ ಜೋಡಣೆದಾರರೇ ಬೇಕಾಗುತ್ತಿತ್ತು. ಒಂದು ರೀತಿಯಲ್ಲಿ ಅದು ತುಂಬಾ ಮೋಡಿಯಾಗಿ ಬ್ರಹ್ಮಲಿಪಿಯಂತೆಯೇ ಇರುತ್ತಿತ್ತು. ಈಗಿನ ಗಣಕಯಂತ್ರದ ಅಕ್ಷರ ಜೋಡಣೆದಾರರು ಇಂತಹ ಸ್ಕ್ರಿಪ್ಟ್ ಬಂದಾಗ ಬೇರೆ ಪ್ರತಿಯನ್ನು ಮಾಡಿಕೊಡಿ ಎನ್ನುವರು. ಇಲ್ಲದಿದ್ದರೆ ತಮಗೆ ತೋಚಿದ್ದನ್ನು ಅಕ್ಷರ ಜೋಡಿಸಿ ತುಂಬ ತಪ್ಪುಗಳನ್ನು ಮಾಡುತ್ತಾರೆ. ಇದರಿಂದ ತುಂಬ ಕಾಲ ವ್ಯಯವಾಗುತ್ತದೆ.

ಒಟ್ಟಾರೆ ಲೇಖಕ, ಪ್ರಕಾಶಕ, ಮುದ್ರಕರ ನಡುವೆ ಅತ್ಯಂತ ಸೌಹಾರ್ದಮಯ ಸಂಬಂಧ, ಕೃತಿಯನ್ನು ಚಂದವಾಗಿ ಸಿದ್ಧಪಡಿಸುವ ಕಾಳಜಿ ಇರಬೇಕಾದ್ದು ಮುಖ್ಯ. ಎಲ್ಲರೂ ಎಲ್ಲಕ್ಕೂ ಹೊಣೆಗಾರರೇ. ಅಂತೆಯೇ ಕಾನೂನು ಮೀರಿದರೆ ಮೂವರೂ ಶಿಕ್ಷಾರ್ಹರೆಂದು ಪರಿಗಣಿಸಲಾಗುತ್ತಿದೆ.

# ಲೇಖಕ ಪ್ರಕಾಶಕರ ಸಂಬಂಧಗಳು



ಡಾ। ರಮಾಕಾಂತ ಜಿ. ಜೋಶಿ

ಕನ್ನಡ ಪುಸ್ತಕೋದ್ಯಮ ಇಂದು ಉತ್ತುಂಗ ಸ್ಥಿತಿಯಲ್ಲಿ ಇರುವಾಗ, ಪ್ರಕಾಶನದ ಪ್ರಮುಖ ಆಧಾರ ಸ್ತಂಭಗಳಾದ ಲೇಖಕರ ಹಾಗೂ ಪ್ರಕಾಶಕರ ಸಂಬಂಧ ಕುರಿತು ಸಮಾಲೋಚಿಸುವದು ಅತೀ ಅವಶ್ಯಕವಾಗಿದೆ. ಈ ಮೊದಲು ಪ್ರಕಾಶನ ವ್ಯವಸಾಯ ಒಂದು ಲಾಭದಾಯಕ ವೃತ್ತಿಯೆಂದು ಪರಿಗಣಿಸದೇ ಇದ್ದಾಗ ಲೇಖಕ-ಪ್ರಕಾಶಕರ ಸಂಬಂಧ ಸೌಹಾರ್ದಯುತವಾಗಿತ್ತು. ಹಳೆಯ ತಲೆಮಾರಿನ ಲೇಖಕರೆಲ್ಲ ಸ್ನೇಹಿತರ ಒತ್ತಾಯಕ್ಕೋ, ತಮಗೆ ಬರೆಯಬೇಕೆನ್ನಿಸಿದ್ದಕ್ಕೋ ಬರೆಯುತ್ತಿದ್ದರು. ಹಾಗೆ ಬರೆದ ಕೃತಿಗಳನ್ನೆಲ್ಲ ಹವ್ಯಾಸಿ ಪ್ರಕಾಶಕರು ಹೇಗೋ ಪ್ರಕಟಿಸಿ, ಅವನ್ನು ಹೊತ್ತುಕೊಂಡು ಮನೆಮನೆಗೆ ಹೋಗಿ ಮಾರಾಟಮಾಡುವ, ಆ ಮೂಲಕ ಸಾಹಿತ್ಯ-ಪ್ರಸಾರ ಮಾಡುವ ಅಲಿಖಿತ ಜವಾಬ್ದಾರಿಯನ್ನು ತಮ್ಮ ತಲೆಯ ಮೇಲೆ ಹೊತ್ತುಕೊಂಡಿದ್ದರು. ಪುಸ್ತಕಕ್ಕೆ ಹಾಕಿದ ದುಡ್ಡು ತಿರುಗಿ ಬಂದರೆ ಸಾಕೆಂಬ ಆಗಿನ ವ್ಯವಸ್ಥೆಯಲ್ಲಿ ಲೇಖಕರಿಗೆ ಗೌರವಧನ ನೀಡುವ ಪರಿಸ್ಥಿತಿಯೇ ಇರಲಿಲ್ಲ. ಅವರೂ ಅದನ್ನು ಅಪೇಕ್ಷಿಸುತ್ತಿರಲಿಲ್ಲ. ಅಂಥದರಲ್ಲಿಯೂ ಅಕಸ್ಮಾತ್ ಪ್ರಕಾಶಕನಿಗೆ ತನ್ನ ಒಂದು ಪುಸ್ತಕ ಪಠ್ಯಪುಸ್ತಕವಾಗಿ ಆಯ್ಕೆಯಾದಾಗ, ಆ ಪ್ರಕಟನೆಯಿಂದ ಬಂದ ಲಾಭಾಂಶದಲ್ಲಿ ಲೇಖಕನಿಗೆ ಗೌರವಧನ ಸಲ್ಲಿಸುವ ಪರಿಪಾಟ ಸ್ವಯಂಪ್ರೇರಿತವಾಗಿ ನಡೆದುಕೊಂಡು ಬಂದಿತ್ತು. ಬಾಯಿ-ಮಾತಿನ ಮೇಲೆ ಇರುವ ಗೌರವ ಆಗಿನ ತಲೆಮಾರಿನವರ ನೈತಿಕ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ. 'ಪ್ರಾಣ ಹೋದರೂ ಅಡ್ಡಿ ಇಲ್ಲ, ವಚನ ಭ್ರಷ್ಟನಾಗಬಾರದು' ಎಂಬ ನೈತಿಕ ಮೌಲ್ಯದಿಂದ ಜೀವನ ಸಾಗಿಸುತ್ತಿದ್ದ ಕಾಲವದು.

ಕನ್ನಡ ಪ್ರಕಾಶನ ಪ್ರಪಂಚದಲ್ಲಿ ಕಳೆದ ಆರು ದಶಕಗಳಿಂದ ಕ್ರಿಯಾಶೀಲವಾಗಿ ತೊಡಗಿಕೊಂಡದ್ದರಿಂದ, ಪ್ರಕಾಶನ ವ್ಯವಸಾಯದಲ್ಲಿ ಕಣ್ಣಿಗೆ ಗೋಚರವಾಗದಂತೆ ಆದ ಬದಲಾವಣೆಗಳಿಂದ ಹಿಡಿದು, ಧಿಡೀರ್ ಎಂದು ಒಂದೇ ರಾತ್ರಿಯಲ್ಲಿ ಆದ ಬದಲಾವಣೆಗಳನ್ನು ಗಮನಿಸಿದ್ದೇನೆ. ಈಗ ಹಳೆಯ ಕಾಲದ ಲೇಖಕ-ಪ್ರಕಾಶಕರ ಸಂಬಂಧಗಳ ಕೆಲವು ಉದಾಹರಣೆಗಳನ್ನು ಉಲ್ಲೇಖಿಸಬಯಸುತ್ತೇನೆ.

ಮನೋಹರ ಗ್ರಂಥಮಾಲೆಯು ೧೯೩೩ರಲ್ಲಿ ಪ್ರಾರಂಭವಾದಾಗ, ಸಾಹಿತ್ಯ ಸಲಹೆಗಾರರಾಗಿದ್ದ ದ.ರಾ. ಬೇಂದ್ರೆ, ವಿ.ಕೃ. ಗೋಕಾಕ ಮತ್ತು ರಂ.ಶ್ರೀ. ಮುಗಳಿಯವರು ಗ್ರಂಥಮಾಲೆಯ ಲೇಖಕರೂ ಆಗಿದ್ದರು. ದ.ರಾ. ಬೇಂದ್ರೆಯವರ ಸಾಹಿತ್ಯ ಪ್ರಮುಖವಾಗಿ ಕಾವ್ಯವಾದದ್ದರಿಂದ ಅವರ ಕೃತಿಗಳನ್ನು ಗ್ರಂಥಮಾಲೆಯ ಜಿಡಿಮುತ್ತುಗಳನ್ನಾಗಿ ಪ್ರಕಟಿಸಲಾಗುತ್ತಿತ್ತು. ವಿ.ಕೃ. ಗೋಕಾಕ ಹಾಗೂ ರಂ.ಶ್ರೀ. ಮುಗಳಿಯವರ ಸಾಹಿತ್ಯವನ್ನು ಗ್ರಂಥಮಾಲೆಯ ಚಂದಾದಾರರಿಗೆ ನೀಡಲಾಗುತ್ತಿತ್ತು. ಎಷ್ಟೋ ವರ್ಷಗಳವರೆಗೆ ಗೌರವಧನದ ಮಾತೇ ಬಂದಿರಲಿಲ್ಲ. ಒಮ್ಮೆ

ವಿ.ಕೃ. ಗೋಕಾಕರ ಮನೆಯಲ್ಲಿ ಯಾವುದೋ ಸಮಾರಂಭ ಬಂದಿತ್ತು. ಜಿ.ಬಿ. ಜೋಶಿಯ ಹತ್ತಿರ ರೋಖ, ಹಣ ಇರಲಿಲ್ಲ. 'ಏನು ಮಾಡುವದು?' ಎಂದು ಯೋಚಿಸಿ, ಕೊನೆಗೆ ಮನೆಯಲ್ಲಿದ್ದ ಬೆಳ್ಳಿಯ ತಾಟು, ತಂಬಿಗೆ, ಥಾಲಿಗಳನ್ನು ಒಯ್ದು ಮುಟ್ಟಿಸಿ ಬಂದಿದ್ದರು. ಹೊತ್ತಿಗೆ ಒದಗಿದ ಸಮಾಧಾನ ಬಂದಿತ್ತು. ಗ್ರಂಥಮಾಲೆಗೆ ಆರ್ಥಿಕ ದುಸ್ಥಿತಿ ಒದಗಿದಾಗ ದ.ರಾ. ಬೇಂದ್ರೆಯವರು ಎಷ್ಟೋ ಸಲ ಕೈಗಡ ಕೊಟ್ಟು ಪಾರು ಮಾಡಿದ್ದಾರೆ. ಶಿವರಾಮ ಕಾರಂತರು ಸಹ ಪ್ರಾರಂಭದಲ್ಲಿ ತಮ್ಮ ಯಾವ ಕೃತಿಗೂ ಗೌರವಧನದ ಬೇಡಿಕೆ ಇಟ್ಟಿರಲಿಲ್ಲ. ಜಿ.ಜಿ. ಜೋಶಿ ಕೊಟ್ಟಿದ್ದನ್ನು ಸಂತೋಷದಿಂದ ಸ್ವೀಕರಿಸಿದ್ದರು. ಆಗ ಯಾರಿಗೂ ತಮ್ಮ ಕೃತಿಗಳಿಂದ ದುಡ್ಡು ಹುಟ್ಟುತ್ತದೆ ಎಂಬ ನಂಬಿಗೆ ವಿಶ್ವಾಸಗಳಿರಲಿಲ್ಲ. ಎಲ್ಲರೂ ಸಾಹಿತ್ಯ ಸೇವೆಯೆಂದೇ ಭಾವಿಸಿದ್ದರು. ಆದರೆ ಅಗತ್ಯದ ಸಮಯದಲ್ಲಿ ಒಬ್ಬರಿಗೊಬ್ಬರು ಬಾಂಧವರಂತೆ ಸಹಾಯ ಸಲ್ಲಿಸಲು ಮುಂದಾಗುತ್ತಿದ್ದರು.

ಇಲ್ಲಿ ಇನ್ನೊಂದು ಮಾತನ್ನು ಹೇಳಬೇಕು. ಶ್ರೀ ಕೆ.ವಿ. ಅಯ್ಯರ್ 'ಶಾಂತಲಾ' ಕಾದಂಬರಿಯನ್ನು ಬರೆದಿದ್ದರು. ಅದು ಗ್ರಂಥಮಾಲೆಯಿಂದ ಪ್ರಕಟವಾಗಬೇಕೆಂಬ ಅದಮ್ಯ ಉತ್ಸಾಹದಿಂದ ಜಿ.ಪಿ. ರಾಜರತ್ನಂ ಅವರ ಮುಖಾಂತರ ಪ್ರಯತ್ನಿಸಿದರು. ಅವರು ಹೇಳಿದ ಕರಾರುಗಳಿಗೆಲ್ಲ ಒಪ್ಪಿ 'ಶಾಂತಲಾ' ಪಡೆದಿದ್ದಾಯಿತು. ಅಷ್ಟರಲ್ಲಿ ಅಯ್ಯರ್ ಅವರು ಅದನ್ನು ಬೆಂಗಳೂರಿನ ಬಿ.ಬಿ.ಡಿ. ಪವರ್ ಪ್ರೆಸ್ಸಿನಲ್ಲಿ ಮುದ್ರಣಕ್ಕೆ ಕೊಟ್ಟಿದ್ದರು. ಸರಿ, ಅಲ್ಲಿಯೇ ಮುದ್ರಿಸಿ ಎಲ್ಲ ಪ್ರತಿಗಳನ್ನು ರೈಲ್ವೆಯಿಂದ ಧಾರವಾಡಕ್ಕೆ ತರಿಸಿಕೊಂಡು, ನಂತರ ಚಂದಾದಾರರಿಗೆ ತಲುಪಿಸಲಾಯಿತು.

ಹಾಗೆಯೇ ಮಾಸ್ತಿಯವರ 'ಚೆನ್ನಬಸವನಾಯಕ' ಕಾದಂಬರಿಯನ್ನು ಗ್ರಂಥಮಾಲೆಯಿಂದ ಪ್ರಕಟಿಸುವದಕ್ಕಾಗಿ ಕೇಳಿಕೊಳ್ಳಲಾಗಿತ್ತು. ಮಾಸ್ತಿಯವರು ಮೊದಲು ಒಪ್ಪಿಗೆ ಸೂಚಿಸಿದ್ದರು. ಆದರೆ ನಂತರ ಅವರ ವಿಚಾರ ಯಾಕೆ ಬದಲಾಯಿತೋ ಗೊತ್ತಿಲ್ಲ! "ಚೆನ್ನಬಸವನಾಯಕ ಕಾದಂಬರಿಯನ್ನು ನಾನು ನನ್ನ ಜೀವನ ಕಾರ್ಯಾಲಯದಿಂದಲೇ ಪ್ರಕಟಿಸುತ್ತೇನೆ. ನಿಮಗೆ ಬೇಕಾದಷ್ಟು ಪ್ರತಿಗಳನ್ನು ಖರೀದಿಸಿ ನೀವು ನಿಮ್ಮ ಚಂದಾದಾರರಿಗೆ ವಿತರಿಸಬಹುದು" ಎಂದರು. ಸ್ವಾಭಿಮಾನವುಳ್ಳ ಜಿ.ಬಿ.ಗೆ. ಈ ಸಲಹೆ ಒಪ್ಪಿಗೆಯಾಗಲಿಲ್ಲ. "ಗ್ರಂಥಮಾಲೆ ಇಲ್ಲಿಯವರೆಗೆ ಪ್ರಸಿದ್ಧ ಕೃತಿಗಳನ್ನು ಪ್ರಕಟಿಸುತ್ತ ಬಂದಿದೆ. ಬೇರೆಯವರಿಂದ ಪ್ರಕಟಗೊಂಡ ಪುಸ್ತಕಗಳನ್ನು ಹಂಚುವ ಕಾರ್ಯ ಮಾಡುವದಿಲ್ಲ" ಎಂದು ತಿಳಿಸಿದರು. ಹೀಗಾಗಿ ಮಾಸ್ತಿಯವರ 'ಚೆನ್ನಬಸವನಾಯಕ' ಗ್ರಂಥಮಾಲೆಯಲ್ಲಿ ಪ್ರಕಟವಾಗಲಿಲ್ಲ. ಆದರೆ ಕೊನೆಯವರೆಗೂ ಸ್ನೇಹಭಾವಕ್ಕೆ ಎಂದೂ ಕುಂದು ಬರಲಿಲ್ಲ. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಗ್ರಂಥಮಾಲೆಯ ಪುಸ್ತಕಗಳನ್ನು ಬಿಡುಗಡೆ ಮಾಡುವ ಕಾರ್ಯಕ್ರಮ ಏರ್ಪಡಿಸಿದಾಗ ಸ್ವತಃ ಮಾಸ್ತಿಯವರೇ ಬಂದು ಪುಸ್ತಕ ಬಿಡುಗಡೆ ಮಾಡಿದರು.

ಶ್ರೀ ಕೀರ್ತಿನಾಥ ಕುರ್ತಕೋಟಿಯವರು ಬರೆಯಲು ಪ್ರಾರಂಭಿಸಿದ್ದೇ ಜಿ.ಬಿ. ಜೋಶಿಯವರ ಒತ್ತಾಯಕ್ಕೆ. 'ನಡೆದು ಬಂದ ದಾರಿ' ಯೋಜನೆಯನ್ನು ರೂಪಿಸುವಾಗ ಮೊದಲಿನಿಂದಲೂ ಜೊತೆಗಿದ್ದು ಅಂತಿಮ ರೂಪ ನೀಡುವವರೆಗೆ ಸಹಭಾಗಿಯಾಗಿದ್ದರು. ಅವರಿಬ್ಬರ ಯೋಚನೆಯೇ ಕೀರ್ತಿಯವರು ಇತಿಹಾಸ ಪ್ರಬಂಧಗಳನ್ನು ಬರೆಯಲು ಚಾಲನೆ ನೀಡಿತು. ಮೊದಲಿನ ಇತಿಹಾಸ ಪ್ರಬಂಧವನ್ನು ಅವರು ೨-೩ ಸಲ ಬರೆಯಲು ಪ್ರಾರಂಭಿಸಿ ೧೦-೧೫ ಪುಟ ಬರೆದು, ಅದನ್ನು ಬದಿಗಿರಿಸಿ ಮತ್ತೆ ಬರೆಯಲು ಪ್ರಾರಂಭಿಸಿದ್ದನ್ನು ಕಣ್ಣಾರೆ ಕಂಡಿದ್ದೇನೆ. ಅವರು ಬರೆದದ್ದನ್ನು ದಿನಾಲು ಅಟ್ಟದ ಮೇಲೆ ಇತರ ಸಾಹಿತ್ಯಾಸಕ್ತರ ಎದುರಿಗೆ ಓದಿ ಅಭಿಪ್ರಾಯ ಪಡೆಯುವದು, ಮತ್ತೆ ತಿದ್ದಿ ಬರೆಯುವದು ನಡೆದೇ ಇತ್ತು. ಕೀರ್ತಿಯವರು ಮನೋಹರ ಗ್ರಂಥಮಾಲೆಯ ಅವಿಭಾಜ್ಯ ಅಂಗವಷ್ಟೇ ಅಲ್ಲ, ಜಿ.ಬಿ. ಜೋಶಿಯವರ ಮನೆಯ ಸದಸ್ಯರೇ ಆಗಿದ್ದರು.

ಜಿ.ಬಿ. ಜೋಶಿಯವರ ಕಾಲೇಜಿನ ಸಹಪಾಠಿಯೂ ಆಗಿದ್ದ ಆರ್.ಎಸ್. ದೇಸಾಯರು ಮಿಲಿಟರಿ ಸೇರಿ ಕರ್ನಲ್ ಆಗಿದ್ದರು. ಅವರು ಧಾರವಾಡದ ದೇಸಾಯರು. ಈಗಿನ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಹೋಗುವ ರಸ್ತೆಯ

ಎಡಬದಿಯ ತೋಟವೆಲ್ಲ ಅವರದೇ. ಆ ಜಾಗವನ್ನು ನಿವೇಶನಗಳನ್ನಾಗಿ ಪರಿವರ್ತಿಸಿ ಸ್ನೇಹಿತರಿಗೆಲ್ಲ ಕೊಡುವ ವಿಚಾರ. ಸುಮಾರು ೧೯೭೧ರ ಸುಮಾರು ಕೀರ್ತಿಯವರಿಗೆ ರಾಜ್ಯ ಸರ್ಕಾರದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು ನೀಡಲಾಯಿತು. ಪ್ರಶಸ್ತಿಯ ಮೊತ್ತ ೨೦೦೦-೦೦ರೂ. ದೇಸಾಯರಿಗೆ ಈ ಸಂತೋಷದ ವಿಷಯ ತಿಳಿದೊಡನೆ ಅವರು ಕೀರ್ತಿಯವರಿಂದ ಆ ೨೦೦೦-೦೦ರೂ. ಗಳನ್ನು ಇಸಿದುಕೊಂಡು ಅವರ ಹೆಸರಿಗೆ ಒಂದು ನಿವೇಶನ ನೋಂದಣಿ ಮಾಡಿಸಿದರು. ಕಾಗದ ನೋಂದಣಿ ಮಾಡಿಸಿದ ಮೊತ್ತ ೫,೫೦೦-೦೦ರೂ.ಗಳು. ಮುಂದೆ ೨-೩ ವರ್ಷಗಳ ನಂತರ ಜಿ.ಬಿ. ಜೋಶಿ ಅವರು ಕೀರ್ತಿಯವರ ಹೆಸರಿನಲ್ಲಿ ನೀಡಬೇಕಾದ ಹಣವನ್ನು ದೇಸಾಯರಿಗೆ ಸಲ್ಲಿಸಿದರು. ಇದು ಗೌರವಧನದ ಇನ್ನೊಂದು ರೂಪ.

ಶ್ರೀ ಗಿರೀಶ ಕಾರ್ನಾಡರ 'ಯಯಾತಿ' ನಾಟಕವನ್ನು ಪ್ರಕಟಿಸಿದ್ದು ೧೯೬೧ರಲ್ಲಿ. ನಂತರ ಅವರ 'ತುಘಲಕ್', 'ಹಯವದನ' ಮುಂತಾದವು ಪ್ರಕಟವಾದವು. ಆದರೆ ಗೌರವಧನ ಮಾತ್ರ ಇರಲಿಲ್ಲ. ೧೯೭೧ರಲ್ಲಿ ಗಿರೀಶರು ಬೇಂದ್ರೆಯವರ ಸಾಕ್ಷ್ಯಚಿತ್ರವನ್ನು ಕರ್ನಾಟಕ ರಾಜ್ಯ ಸರಕಾರಕ್ಕಾಗಿ ನಿರ್ಮಿಸುತ್ತಿರುವಾಗ, ನನಗೆ ಆ ಚಿತ್ರದ ಶೂಟಿಂಗ್ ಸಮಯದಲ್ಲಿ ನಿರ್ಮಾಣ ವ್ಯವಸ್ಥಾಪಕನಾಗಿ ಕೆಲಸ ನಿರ್ವಹಿಸಲು ಹೇಳಿದರು. ಏನೂ ಅನುಭವ ಇರದಿದ್ದರೂ ವ್ಯವಸ್ಥಾಪಕನ ನಿರ್ವಹಣೆಯನ್ನು ಗಿರೀಶರ ಮಾರ್ಗದರ್ಶನದಲ್ಲಿ ಚೊಕ್ಕವಾಗಿ ನಿರ್ವಹಿಸಿದೆ. ಆಗಿನ ಇಡೀ ಸಾಕ್ಷ್ಯಚಿತ್ರದ ಅಂದಾಜು ವೆಚ್ಚವೇ ೪೦,೦೦೦-೦೦ ರೂ.ಗಳು. ಸಾಕ್ಷ್ಯಚಿತ್ರ ಮುಗಿದಾಗ, ನಾನು ನಿರ್ವಹಿಸಿದ ಕಾರ್ಯಕ್ಕಾಗಿ ೧೦೦೦-೦೦ ರೂ.ಗಳ ಸಂಭಾವನೆಯನ್ನು ನೀಡಲು ಬಂದರು. ಆಗ ನಾನು, "ಗಿರೀಶ, ನಿನ್ನ ನಾಟಕಗಳಿಗೆ ಇಲ್ಲಿಯವರೆಗೆ ಯಾವದೇ ರೀತಿಯ ಗೌರವಧನ ನೀಡಿಲ್ಲ. ಗ್ರಂಥಮಾಲೆಯ ಪರಿಸ್ಥಿತಿಯಲ್ಲಿ ಕೈಯೆತ್ತಿ ಹಣ ನೀಡುವದು ಅಸಾಧ್ಯದ ಕೆಲಸ. ಆದ್ದರಿಂದ ನೀನು ನೀಡಲಿರುವ ಸಂಭಾವನೆಯನ್ನೇ ಗೌರವಧನವನ್ನಾಗಿ ಸ್ವೀಕರಿಸು" ಎಂದು ಮನವೊಲಿಸಿದೆ. ಅಲ್ಲಿಂದ ಜಿ.ಬಿ. ಜೋಶಿ ತೀರಿಕೊಳ್ಳುವವರೆಗೂ ಗೌರವಧನದ ವಿಷಯ ಮುಚ್ಚಿದ ಮುಷ್ಟಿಯಂತಿತ್ತು. ಜಿ.ಬಿ. ತೀರಿಕೊಂಡ ನಂತರ ಅದಕ್ಕೊಂದು ವ್ಯಾವಹಾರಿಕ ಸ್ವರೂಪ ನೀಡಿ ಅವರ ಪುಸ್ತಕಗಳ ಮಾರಾಟದ ಮೇಲೆ ಶೇಕಡಾ ಇಂತಿಷ್ಟು ಎಂದು ಪ್ರತಿವರ್ಷ ಲೆಕ್ಕಮಾಡಿ ಸಲ್ಲಿಸುತ್ತಿದ್ದೇವೆ. ಎಲ್ಲಿಯೂ ಅಪನಂಬಿಕೆಗೆ ಅವಕಾಶವಿಲ್ಲ.

ಗಿರೀಶರ ಬಗ್ಗೆ ಇನ್ನೊಂದು ಮಾತು ಹೇಳಬೇಕು. ಅವರು ತಮ್ಮ ಆಕ್ಸ್‌ಫರ್ಡ್ ಕಾಲೇಜಿನ ವಿದ್ಯಾಭ್ಯಾಸ ಮುಗಿಸಿದ ಮೇಲೆ ಕೆಲಸಕ್ಕೆ ಸೇರಿದ್ದು 'ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್' ಎಂಬ ಪ್ರಕಾಶನ ಸಂಸ್ಥೆಯಲ್ಲಿ. ಅಲ್ಲಿ ಸೇರಿದ ಕೂಡಲೇ ಅಲ್ಲಿಯ ವ್ಯಾವಹಾರಿಕ ಶಿಸ್ತನ್ನು ಕನ್ನಡಕ್ಕೂ ತರುವ ಉತ್ಸಾಹ ತೋರಿದರು. ಮನೋಹರ ಗ್ರಂಥಮಾಲೆ ಹಾಗೂ ಲೇಖಕರ ನಡುವೆ ಇರಬೇಕಾದ ಲಿಖಿತ ಒಪ್ಪಂದ ಪತ್ರಕ್ಕೆ O.U.P. ಯ ಮಾದರಿ ಪತ್ರವನ್ನು ಕಳಿಸಿಕೊಟ್ಟರು. ನನ್ನ ಯೌವನದ ಉತ್ಸಾಹದಲ್ಲಿ ಆ ಒಪ್ಪಂದ-ಪತ್ರವನ್ನೇ ಇಡಿಯಾಗಿ ಭಟ್ಟಿ ಇಳಿಸಿ ಒಪ್ಪಂದ ಪತ್ರ ತಯಾರಿಸಿದೆ. ಇಂಗ್ಲೆಂಡ್, ಯುರೋಪ್, ಅಮೇರಿಕಾ ದೇಶಗಳಲ್ಲಿಯ ಸಂದರ್ಭಕ್ಕೂ ನಮ್ಮ ಕನ್ನಡದ ಪಾರಂಪರಿಕ ಸಂಸ್ಕೃತಿಯ ಸಂದರ್ಭಕ್ಕೂ ಅಜಗಜಾಂತರ



ಅಂತರವಿರುವುದನ್ನು ಈಗ ಮನಗಂಡಿದ್ದೇನೆ. ಆಗಿನ ಕೆಲವು ಲೇಖಕರು ಆ ಒಪ್ಪಂದ-ಪತ್ರಕ್ಕೇ ಸಹಿ ಹಾಕಿ ಕಳಿಸಿದರು. ಆ ಒಪ್ಪಂದ-ಪತ್ರ ಒಂದು ರೀತಿಯಿಂದ ಪೂರ್ತಿಯಾಗಿ ಪ್ರಕಾಶಕರ ಪಕ್ಷಪಾತಿಯಾದದ್ದು. ಅಲ್ಲಿ ಲೇಖಕರಿಗೆ ಸ್ವಾತಂತ್ರ್ಯವೇ ಇಲ್ಲ. ಅದು ತಪ್ಪೆಂದು ಮನಗಂಡಿದ್ದೇನೆ.

ಆದರೆ, ಕನ್ನಡದ ಲೇಖಕರೂ ಸಹ ಪ್ರಕಾಶಕರ ಮಹತ್ವವನ್ನು ಅರಿಯಬೇಕು. ಯಾವದೇ ಒಂದು ಪುಸ್ತಕ ಪ್ರಕಟವಾಗಿ ಜನಸಾಮಾನ್ಯರ ಮೆಚ್ಚುಗೆ ಗಳಿಸಬೇಕಾದರೆ ಲೇಖಕನ ಕೃತಿಯ ಸಾಮರ್ಥ್ಯದ ಜೊತೆಗೆ ಪ್ರಕಾಶಕನ ಪ್ರಕಟನಾ ಕೌಶಲ್ಯ ಹಾಗೂ ಪ್ರಚಾರ ವಿನ್ಯಾಸಗಳೂ ಅಷ್ಟೇ ಮಹತ್ವದ ಸ್ಥಾನ ಗಳಿಸುತ್ತವೆ. ಕನ್ನಡ ಪ್ರಕಟನಾ ಪ್ರಪಂಚದಲ್ಲಿ ಪ್ರಕಾಶಕರು ತಮ್ಮ ಜವಾಬ್ದಾರಿಯನ್ನು ಅರಿತು ಕಾರ್ಯನಿರ್ವಹಿಸುವಂಥ ಸಮರ್ಥ ಪ್ರಕಾಶಕರು ಕೆಲವೇ ಜನರು ಇದ್ದಾರೆ. ಉಳಿದವರೆಲ್ಲ ಹವ್ಯಾಸಿ ಅರೆ-ಪ್ರಕಾಶಕರು, ಅಂದರೆ ಪ್ರಕಾಶನ ವೃತ್ತಿಯೇ ಅವರ ಉದ್ಯೋಗವಲ್ಲ. ತಮ್ಮ ಉಪಜೀವನಕ್ಕೆ ಬೇರೆ ಕೆಲಸ ನೋಡಿಕೊಂಡು, ಉಳಿದ ಸಮಯದಲ್ಲಿ ಪ್ರಕಾಶನ ವೃತ್ತಿಯನ್ನು ಅವಲಂಬಿಸಿದವರು. ಅವರಿಗೆ ಪ್ರಕಾಶನ ವ್ಯವಸಾಯ ಒಂದು ಅಡ್ಡ ಕಸಬಿನಂತೆ. ಹೀಗಾಗಿ ಇಂಥ ಬಹಳಷ್ಟು ಪ್ರಕಾಶಕರಿಗೆ ಪ್ರಕಾಶನ ಧರ್ಮದ ಜವಾಬ್ದಾರಿಯೇ ಗೊತ್ತಿಲ್ಲ. ಇಂಥವರಿಗೆ ಪುಸ್ತಕ ಪ್ರಕಾಶನವೆಂದರೆ ಎಂಥದೋ ಒಂದು ಹಸ್ತಪ್ರತಿ ದೊರಕಿಸಿಕೊಂಡು, ಮುದ್ರಿಸಿ, ಸರಕಾರದ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಸಗಟು ಖರೀದಿಯ ವಿಭಾಗದಲ್ಲಿ ಪ್ರತಿ ವರ್ಷ ೩೦೦ ಪ್ರತಿಗಳನ್ನು ಸಾಗುಹಾಕಿದರೆ ಇವರ ಪ್ರಕಾಶನದ ಕಾರ್ಯ ಮುಗಿದಂತೆ. ಇಂಥವರು ಪ್ರಕಟಿಸಿದ ಪುಸ್ತಕಗಳು ಕನ್ನಡ ಪುಸ್ತಕ ಮಾರುಕಟ್ಟೆಯಲ್ಲಿ ಔಷಧಿಗೂ ದೊರಕುವುದಿಲ್ಲ. ಇಂಥ ಪ್ರಕಾಶಕರಿಗೆಲ್ಲ ಕನ್ನಡ ಪುಸ್ತಕ ವಲಯದಲ್ಲಿ 'ಗ್ರಂಥಾಲಯ ಪ್ರಕಾಶಕರು' ಅಥವಾ 'ಡಿಸೆಂಬರ ಪ್ರಕಾಶಕರು' ಎಂದೇ ಹೆಸರು ಹುಟ್ಟಿಕೊಂಡಿದೆ. ಅವರಿಗೂ ಕೂಡ ಈ ಬಗ್ಗೆ ಕೊಂಚವೂ ಮುಜುಗರವಾಗುವುದಿಲ್ಲ ಎನ್ನುವದೇ ವಿಷಾದದ ಸಂಗತಿ. ಈ ಪರಿಸ್ಥಿತಿಯಿಂದ ಕನ್ನಡ ಪುಸ್ತಕ ಪ್ರಕಾಶನ ಹೊರಬಂದು ಶಕ್ತಿಯುತವಾಗಬೇಕಾಗಿದೆ.

ಕನ್ನಡ ಲೇಖಕರ ಸಜ್ಜನಿಕೆಯ, ಸೌಜನ್ಯದ ಸಂಗತಿಯೊಂದನ್ನು ನಾನು ಉಲ್ಲೇಖಿಸಲೇಬೇಕು. ಇತ್ತೀಚಿನ ವರ್ಷಗಳಲ್ಲಿ ಗ್ರಂಥಮಾಲೆಯು ಶ್ರೀ ನಾ. ಡಿಸೋಜಾ ಅವರ ಕಾದಂಬರಿಯೊಂದನ್ನು ಪ್ರಕಟಿಸಿತು. O.U.P. ಮಾದರಿಯ ಒಪ್ಪಂದ-ಪತ್ರಕ್ಕೆ ಅವರು ಸಹಿ ಕೂಡ ಹಾಕಿದ್ದರು. ನಾ. ಡಿಸೋಜಾರು ಕನ್ನಡದ ಪ್ರತಿಭಾವಂತ ಲೇಖಕರಷ್ಟೇ ಅಲ್ಲ, ಕನ್ನಡ ಸಾಹಿತ್ಯವನ್ನು ಯಥೇಚ್ಛವಾಗಿ ರಚಿಸುತ್ತಿರುವವರು. O.U.P. ಮಾದರಿ ಒಪ್ಪಂದ-ಪತ್ರದಲ್ಲಿ ಲೇಖಕರು ಮುಂದೆ ರಚಿಸುವ ಕೃತಿಗಳಿಗೆಲ್ಲ ಮೊದಲಿನ ಪ್ರಕಾಶಕರೇ ಹಕ್ಕುಬಾಧ್ಯಸ್ಥರು, ಲೇಖಕರು ರಚಿಸುವ ಕೃತಿಗಳನ್ನೆಲ್ಲ ಮೊದಲಿನ ಪ್ರಕಾಶಕರಿಗೇ ಪ್ರಕಟನೆಗೆ ನೀಡತಕ್ಕದ್ದು ಎಂಬ ಒಂದು ಕರಾರು ಇತ್ತು. ಅದರ ಪ್ರಕಾರ ಮರುವರ್ಷ ಅವರು ರಚಿಸಿದ





ಕೃತಿಯನ್ನು ಸೂಚಿಸಿ ನಾವು ಪ್ರಕಟಿಸುತ್ತೇವೆಯೋ ಹೇಗೆ? ಎಂದು ಕೇಳಿದ್ದರು. ಆಗಲೇ ನಮ್ಮ ತಪ್ಪಿನ ಅರಿವಾದದ್ದು. ಅವರಿಗೆ ಕೂಡಲೇ ಪತ್ರ ಬರೆದು ಅವರು ತಮ್ಮ ಮುಂದಿನ ರಚನೆಗಳನ್ನು ಬೇಕಾದ ಪ್ರಕಾಶಕರಿಗೆ ನೀಡಲು ಸ್ವತಂತ್ರರಿದ್ದಾರೆ ಎಂಬ ವಿಷಯ ತಿಳಿಸಿ, ಆಗಾಗ ನಮಗೂ ಪ್ರಕಟನೆಗೆ ಕೃತಿಗಳನ್ನು ನೀಡಬೇಕು ಎಂದು ಕೋರಿದೆ. ನಂತರ ಒಪ್ಪಂದ-ಪತ್ರದಲ್ಲಿಯ ಆ ಕರಾರನ್ನು ತೆಗೆದುಹಾಕಿದೆ.

ಹಾಗೆಯೇ ಇನ್ನೊಂದು ಪ್ರಸಂಗವನ್ನು ಉಲ್ಲೇಖಿಸಲೇಬೇಕು. ಬಿ.ಜಿ.ಎಲ್. ಸ್ವಾಮಿಯವರು ಮದ್ರಾಸಿನಲ್ಲಿ ಪ್ರೆಸಿಡೆನ್ಸಿ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗ, ಗಿರೀಶ ಕಾರ್ನಾಡರೂ ಮದ್ರಾಸಿನ O.U.P. ಶಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಜಿ.ಬಿ. ಜೋಶಿ, ಕೀರ್ತಿ, ಗಿರೀಶ, ನಾನು ಸೇರಿಕೊಂಡು ಬಿ.ಜಿ.ಎಲ್. ಸ್ವಾಮಿಯವರ ಮನೆಗೆ ಬಂದು ಸಂಜೆ ಊಟಕ್ಕಾಗಿ ಹೋಗಿದ್ದೆವು. ಅದಾಗಲೇ ಬಿ.ಜಿ.ಎಲ್. ಸ್ವಾಮಿಯವರು ತಮ್ಮ 'ಪಂಚಕಲಶ ಗೋಪುರ', 'ನಾನು ಕಂಡ ಅಮೇರಿಕಾ' ಕೃತಿಗಳ ಮೂಲಕ ಪ್ರಸಿದ್ಧರಾಗಿದ್ದರು. 'ಚಟ ಹಿಡಿಸಿದ ಗಿಡಗಳು' ಎಂಬ ಕೃತಿಯ ರಚನೆಯಲ್ಲಿ ತೊಡಗಿಸಿಕೊಂಡಿದ್ದರು. ಅಂದು ಅವರ ಮನೆಯಲ್ಲಿ ಹರಟೆ ಹೊಡೆಯುತ್ತಿರುವಾಗ, ಅವರು ತಮ್ಮ ಪ್ರಿನ್ಸಿಪಾಲರ ಅನುಭವಗಳನ್ನು ನಿವೇದಿಸುತ್ತಿದ್ದಾಗ, 'ಅದನ್ನೇ ಬರೆದು ಗ್ರಂಥಮಾಲೆಗೆ ಕೊಡಿರಿ' ಎಂದು ಜಿ.ಬಿ. ಬೇಡಿಕೆ ಇಟ್ಟರು, ಅವರು 'ಹೂಂ' ಎಂದು ಕೆಲ ತಿಂಗಳುಗಳಲ್ಲಿ ಹಸ್ತಪ್ರತಿ ತಯಾರಿಸಿ ಕಳಿಸಿದರು. ಬಿ.ಜಿ.ಎಲ್. ಸ್ವಾಮಿಯವರು ಬಹಳ ಅಚ್ಚುಕಟ್ಟಿನ ಶಿಸ್ತಿನ ವ್ಯಕ್ತಿ. ಕನ್ನಡದ ಪ್ರಖ್ಯಾತ ಡಿ.ವಿ. ಗುಂಡಪ್ಪನವರ ಮಗನೆಂದ ಮೇಲೆ ಕೇಳಬೇಕೇ? ಶಿಸ್ತು, ಕರ್ತವ್ಯ, ನಿಷ್ಠೆ ಹಾಗೂ ಪ್ರಾಮಾಣಿಕತೆಗೆ ಮದ್ರಾಸಿನ ತುಂಬ ಹೆಸರುವಾಸಿಯಾದವರು. ಅಂತೂ ಸ್ವಾಮಿಯವರು 'ಕಾಲೇಜು ರಂಗ' ಹಸ್ತಪ್ರತಿಯನ್ನು ಕಳಿಸಿದರು. ಅವರೂ ಕೂಡ O.U.P. ಮಾದರಿಯ ಒಪ್ಪಂದ-ಪತ್ರಕ್ಕೆ ಸಹಿಯನ್ನು ಹಾಕಿ ಕಳಿಸಿದರು. ಅದರ ನಂತರ ಅವರ ಇನ್ನೊಂದು ಕೃತಿ 'ದೌರ್ಗಂಧಿಕಾಪಹರಣ'ವನ್ನು ಪ್ರಕಟಿಸಿದೆವು. ಜಿ.ಬಿ. ಜೋಶಿಯವರು ಆರ್ಥಿಕ ವ್ಯವಹಾರದಲ್ಲಿ ಅಸ್ತವ್ಯಸ್ತ ವ್ಯಕ್ತಿಯಾಗಿದ್ದರು. ಅವರ ಆರ್ಥಿಕ ಪರಿಸ್ಥಿತಿ ಯಾವಾಗಲೂ ಶೋಚನೀಯವಾಗಿಯೇ ಇರುತ್ತಿತ್ತು. ಹೀಗಾಗಿ ಲೇಖಕರಿಂದ ಗೌರವಧನಕ್ಕಾಗಿ ನೆನಪಿನೋಲೆಗಳು ಬರುತ್ತಲೇ ಇರುತ್ತಿದ್ದವು. ಹಾಗೆ ಬಂದಾಗ ಮಾತ್ರ ಎಲ್ಲಿಯೋ ಹಣಹೊಂದಿಸಿ ಕಳಿಸುತ್ತಿದ್ದೆವು. ಹೀಗೆ ಸ್ವಾಮಿಯವರಿಂದಲೂ ಪತ್ರ ಬಂದ ಮೇಲೆ ಹಣ ಕಳಿಸಲಾಗಿತ್ತು. ಬಿ.ಜಿ.ಎಲ್. ಸ್ವಾಮಿಯವರಿಗೆ ಮಕ್ಕಳಿರಲಿಲ್ಲ. ಅವರ ನಂತರ ಅವರ ಪತ್ನಿ ಹಕ್ಕುದಾರರಾದರು. ಅವರ ನಿಧನಾನಂತರ ಅವರ ಬಂಧುಗಳು ಪತ್ರ ಬರೆದು ಬಿ.ಜಿ.ಎಲ್. ಸ್ವಾಮಿಯವರ ಎಲ್ಲ ಕೃತಿಗಳ ಹಕ್ಕು ತಮಗೆ ಸೇರಿದ್ದೆಂದು ತಿಳಿಸಿ, ಮುಂದೆ ಅವರ ಕೃತಿಗಳನ್ನು ಪುನರ್‌ಮುದ್ರಿಸುವಾಗ ತಮ್ಮಿಂದ ಅನುಮತಿ ಪಡೆಯಬೇಕೆಂದೂ ತಿಳಿಸಿದರು. ಆಗ ಅವರಿಗೆ ಲೇಖಕ-ಪ್ರಕಾಶಕರ ಒಪ್ಪಂದ ಪತ್ರದ ವಿಷಯ ತಿಳಿಸಿ ಲೇಖಕರ ವಾರಸುದಾರರಿಗೆ ಗೌರವಧನ ಈ ಮೊದಲು ಒಪ್ಪಿಕೊಂಡಂತೆ ನೀಡುವದಾಗಿ ತಿಳಿಸಿದೆವು. ಅದಕ್ಕೆ ಅವರು ಒಪ್ಪಲಿಲ್ಲ, ಸ್ವಾಮಿಯವರ ಎಲ್ಲ ಕೃತಿಗಳ ಪ್ರಕಟಣೆಯ ಹಕ್ಕು ತಮಗೇ ಸೇರಿದ್ದೆಂದೂ ತಾವು ಆ ಹಕ್ಕನ್ನು ಮೈಸೂರಿನ ಕಾವ್ಯಾಲಯ ಪ್ರಕಾಶನಕ್ಕೆ ನೀಡಿದ್ದಾಗಿಯೂ ತಿಳಿಸಿದರು. ಕಾಯದೆಬದ್ಧವಾಗಿ 'ಕಾಲೇಜುರಂಗ' ಮತ್ತು 'ದೌರ್ಗಂಧಿಕಾಪಹರಣ'

ಕೃತಿಗಳ ಪುನರ್‌ಮುದ್ರಣದ ಹಕ್ಕು ನಮ್ಮ ಹತ್ತಿರವೇ ಇದ್ದರೂ ಪ್ರಕಟನಾರಂಗದಲ್ಲಿ ಅನವಶ್ಯಕ ವೈಷಮ್ಯ ಬೆಳೆಯಬಾರದೆಂದು ನಮ್ಮ ಹಕ್ಕನ್ನು ಅವರಿಗೆ ಬಿಟ್ಟುಕೊಟ್ಟು ಬಿಟ್ಟೆವು.

ಈಗ ಕನ್ನಡ ಪ್ರಕಾಶನ ಪುಸ್ತಕೋದ್ಯಮವಾಗಿ ಬೆಳೆಯುತ್ತಿರುವ ಕಾಲದಲ್ಲಿ ಲೇಖಕ ಪ್ರಕಾಶಕರ ಸಂಬಂಧವನ್ನು ಕೇವಲ ಮಿತ್ರತ್ವದ ಆಪ್ತ ನೆಲೆಯಲ್ಲಿ ನೋಡದೇ ವ್ಯಾವಹರಿಕವಾಗಿ ನೋಡಬೇಕಾದ ಪ್ರಸಂಗ ಬಂದೊದಗಿದೆ. ಹಳೆಯ ಕಾಲದ ಬಾಯಿಮಾತಿನ ಬೆಲೆಯು ತನ್ನ ಕಿಮ್ಮತ್ತನ್ನು ಕಳೆದುಕೊಂಡಿದೆ. ಈಗ ಏನಿದ್ದರೂ ಲಿಖಿತ-ಒಪ್ಪಂದಗಳ ಕಾಲ. ಆಡಿದ ಮಾತಿಗಿಂತ, ಬರೆದು ಸಹಿ ಮಾಡಿದ ಮಾತಿಗೆ ಕಾಯದೆಯ ಮನ್ನಣೆ ಇದೆ. ಆದ್ದರಿಂದ ಈಗ ಲೇಖಕ-ಪ್ರಕಾಶಕರಿಬ್ಬರೂ ತಾವು ಒಪ್ಪಿಕೊಂಡ ಕರಾರುಗಳನ್ನು ಕಾಗದದ ಮೇಲೆ ಇಳಿಸಿ, ಇಬ್ಬರೂ ಸಹಿ ಹಾಕಿ, ಇಬ್ಬರು ಸಾಕ್ಷಿಗಳ ಸಹಿಯನ್ನು ಹಾಕಿಸಿಕೊಂಡು ಕಾಯದೆಬದ್ಧ ಕರಾರುಪತ್ರವನ್ನು ನಿರ್ಮಿಸಬೇಕು. ಅದರಿಂದ ಮುಂದೆ ಒದಗಬಹುದಾದ ದುರಂತಗಳು, ದೋಷಾರೋಪಣೆಗಳು ಕಡಿಮೆಯಾಗುತ್ತವೆ. ಇವುಗಳ ಜೊತೆಗೆ ಲೇಖಕರು ತಮ್ಮ ಕರ್ತವ್ಯ ಮಿತಿಗಳನ್ನು ಅರಿತುಕೊಳ್ಳಬೇಕು. ಒಬ್ಬ ಹೊಸ ಲೇಖಕನನ್ನು ಓದುಗ ಪ್ರಪಂಚಕ್ಕೆ ಪರಿಚಯಿಸಿ ಅವನನ್ನು ಪ್ರಸಿದ್ಧಿಗೊಳಿಸುವಲ್ಲಿ ಪ್ರಕಾಶಕನ ಪಾತ್ರವೂ ಬಹಳ ಮಹತ್ವದ್ದು ಎಂಬುದನ್ನು ಲೇಖಕರು ಅರಿಯಬೇಕು. ಹಾಗೆ ಒಮ್ಮೆ ಪ್ರಸಿದ್ಧಿ ಪಡೆದ ಮೇಲೆ, ಅದಕ್ಕೆ ಕಾರಣೀಭೂತವಾದ ಪ್ರಕಾಶಕನನ್ನು ಮರೆಯಬಾರದು. ಆದ್ದರಿಂದಲೇ ಯಾವದೇ ಒಂದು ಕೃತಿಯು ಪ್ರಸಿದ್ಧಿ ಹೊಂದಿ, ಅನೇಕ ಭಾಷೆಗಳಿಗೆ ಭಾಷಾಂತರವಾಗಿ, ಪ್ರಶಸ್ತಿ-ಬಹುಮಾನಗಳನ್ನು ಗಳಿಸಿದಾಗ, ಅದಕ್ಕೆ ಸರಿಸಮನಾಗಿ ಪ್ರಯತ್ನಿಸಿದ ಪ್ರಕಾಶಕನಿಗೂ ಅದರಲ್ಲಿ ಸಮಪಾಲು ದೊರೆಯಬೇಕು. ಆದರೆ ಈ ವಿಷಯದಲ್ಲಿ ಕನ್ನಡ ಪ್ರಕಾಶಕರು ಬಹಳ ಉದಾರಿಗಳು. ಯಾವದೇ ಕೃತಿಗೆ ಪ್ರಶಸ್ತಿ-ಬಹುಮಾನ ದೊರಕಿದಾಗ ಯಾವ ಕನ್ನಡ ಪ್ರಕಾಶಕನನ್ನೂ ಗುರುತಿಸುವದಿಲ್ಲ.

ಇದಕ್ಕೆ ಅಪವಾದವಾಗಿ ಮಾಸ್ತಿ ಪ್ರತಿಷ್ಠಾನವು 'ಮಾಸ್ತಿ ಕಥಾಪುರಸ್ಕಾರ'ಕ್ಕೆ ಅರ್ಜಿಗಳನ್ನು ಕರೆಯುವಾಗ ಲೇಖಕ-ಪ್ರಕಾಶಕರಿಬ್ಬರಿಂದಲೂ ಜಂಟಿಯಾಗಿ ಅರ್ಜಿಯನ್ನು ಆಹ್ವಾನಿಸುತ್ತದೆ ಮತ್ತು ಪುರಸ್ಕಾರವು ಲೇಖಕರಿಗೆ ಹಾಗೂ ಪ್ರಕಾಶಕರಿಗೆ ಇಬ್ಬರಿಗೂ ವೈಯಕ್ತಿಕವಾಗಿ ನೀಡಲಾಗುತ್ತದೆ. ಇದರರ್ಥ ಪ್ರಕಾಶಕರ ಶ್ರಮವನ್ನು ಗುರುತಿಸುವ ಈ ಕ್ರಮ ಪ್ರಶಂಸಾರ್ಹವಾದದ್ದು.

ಈ ದಿಕ್ಕಿನಲ್ಲಿ ಕರ್ನಾಟಕ ಪ್ರಕಾಶಕರ ಸಂಘವು ಅನೇಕ ಪರಿಣತರಿಂದ ಪರಿಶೀಲಿಸಿ ಒಂದು ಮಾದರಿ 'ಲೇಖಕರ-ಪ್ರಕಾಶಕರ ಒಪ್ಪಂದ-ಪತ್ರ'ವನ್ನು ತಯಾರಿಸಿದೆ. ಇದು ಲೇಖಕರಿಗೆ ಮತ್ತು ಪ್ರಕಾಶಕರಿಗೆ ಮಾರ್ಗದರ್ಶನಕ್ಕಾಗಿ ಮಾತ್ರ. ಪ್ರತಿಯೊಬ್ಬ ಲೇಖಕ-ಪ್ರಕಾಶಕ ತಮ್ಮ ಅನುಕೂಲತೆಗಳ ಅವಶ್ಯಕತೆಗೆ ತಕ್ಕಂತೆ ಬದಲಾಯಿಸಿಕೊಳ್ಳಬಹುದು. ಆದರೆ ಪುಸ್ತಕ ಪ್ರಕಟವಾಗುವ ಮೊದಲು ಲೇಖಕ-ಪ್ರಕಾಶಕರ ಒಪ್ಪಂದ-ಪತ್ರವು ತಯಾರಾಗಿ ಇಬ್ಬರ ಸಹಿಯೂ ಆಗಿರುವದು ಅತ್ಯವಶ್ಯ. ಈ ಒಪ್ಪಂದ-ಪತ್ರದಿಂದ ಮುಂದಿನ ದಾರಿ ಸುಗಮವಾಗುವದರ ಜೊತೆಗೆ ಅನವಶ್ಯಕ ತಿಕ್ಕಾಟ ಅಥವಾ ವೈರತ್ವಕ್ಕೆ ಇತಿಶ್ರೀ ಹಾಡಿದಂತಾಗುತ್ತದೆ.

# ಕರಡು ತಿದ್ದುವಿಕೆ: ಕೆಲವು ವಿಚಾರಗಳು



ಪ್ರೊ| ಜಿ. ಅಶ್ವತ್ಥನಾರಾಯಣ

ಕನ್ನಡ ರತ್ನಕೋಶ (ಕಸಾಪ)ದಲ್ಲಿ ಕರಡಚ್ಚು ಪದ ಅಕಾರಾದಿಯಲ್ಲಿಲ್ಲ. ಆದರೆ ಕೆಲವು ಉಪಯುಕ್ತ ಮಾಹಿತಿಗಳು ಎಂಬ ಅನುಬಂಧದ ವಿಭಾಗದಲ್ಲಿ ಕರಡಚ್ಚು ತಿದ್ದುಪಡಿ ಚಿಹ್ನೆಗಳು ಎಂಬ ಶೀರ್ಷಿಕೆ ಕೊಟ್ಟು ೨೯ ಕರಡಚ್ಚು ಚಿಹ್ನೆಗಳನ್ನು, ಅವುಗಳ ಅರ್ಥವನ್ನು ಕೊಟ್ಟಿದ್ದಾರೆ. ಅನೇಕರು ಈ ಚಿಹ್ನೆಗಳನ್ನು ಗಮನಿಸಿ ಕರಡಚ್ಚು ತಿದ್ದುವುದನ್ನು ಕಲಿತುಕೊಂಡಿದ್ದಾರೆ.

ಕರಡಚ್ಚು ತಿದ್ದುವಿಕೆ ಎಂಬ ಮಾತಿನಲ್ಲಿ ಮುಖ್ಯವಾಗಿ ೩ ಮಾತುಗಳಿವೆ ಕರಡು, ಅಚ್ಚು, ತಿದ್ದು ಎಂಬ ಪದಗಳು. ನಿಘಂಟಿನಲ್ಲಿ ಈ ಪದಗಳಿಗೆ ಬೇರೆ ಬೇರೆ ಸಾಮಾನ್ಯ ಅರ್ಥಗಳಿವೆ. ಆದರೆ ಈ ೩ ಪದಗಳು ಸೇರಿ ಸಂಯುಕ್ತ ಪದವಾದಾಗ ಪಾರಿಭಾಷಿಕ ಪದವಾಗಿದೆ. ಕರಡಚ್ಚು ತಿದ್ದುವುದು ಎಂಬುದು ಮುದ್ರಣ ಕಲೆ ವ್ಯಾಸಂಗದಲ್ಲಿ ಕಲಿಯಲೇಬೇಕಾದ ವಿಷಯವಾಗಿದೆ.

ಜಿ. ವೆಂಕಟಸುಬ್ಬಯ್ಯನವರ ಪ್ರಿಸಂ ಕನ್ನಡ ಕ್ಲಿಷ್ಟ ಪದಕೋಶದಲ್ಲಿ (ಪುಟ. ೮೩) ಕರಡು (<ಮರಾ.ಖರಡಾ) (ನಾ) ಕಚ್ಚಾಪ್ರತಿ, ನಕಲು, ಕರಡು, ಕಚ್ಚಾಲೆಕ್ಕದ ಟಿಪ್ಪಣಿ. ಕರಡಚ್ಚು (ದೇ) (ನಾ) ಮುದ್ರಣದ ಕಚ್ಚಾಪ್ರತಿ ಎಂದಿದ್ದಾರೆ. ಇಲ್ಲಿ ಕರಡು, ಕರಡಚ್ಚು ಎರಡರ ಅರ್ಥ ಬೇರೆ ಬೇರೆ ಎಂದು ತಿಳಿಸಿದ್ದಾರೆ. ಆದರೆ ಕರಡು, ಕರಡಚ್ಚು ಎಂಬುದನ್ನು ಒಂದೇ ಅರ್ಥದಲ್ಲಿ ಹಲವರು ಬಳಸುತ್ತಾರೆ. ಇದು ಸರಿಯಲ್ಲ ಎನ್ನಬೇಕಾಗಿದೆ.

ಕರಡಚ್ಚು ತಿದ್ದುವಿಕೆ ಎಂದರೇನು?
ಇಂಗ್ಲಿಷಿನಲ್ಲಿ Proof reading (ಪ್ರೂಫ್ ರೀಡಿಂಗ್) ಎಂಬ ಪದಕ್ಕೆ ಕನ್ನಡದಲ್ಲಿ ಬಳಸುವ ಪದ ಕರಡಚ್ಚು ತಿದ್ದುವಿಕೆ. ಆದರೆ ಕರಡು ತಿದ್ದುವಿಕೆ, ಕರಡಚ್ಚು ತಿದ್ದುಪಡಿ, ಕರಡಚ್ಚು ತಿದ್ದುವಿಕೆ, ಕರಡೋಲೆ ತಿದ್ದುವುದು, ಅಚ್ಚಿನೋಲೆ ತಿದ್ದುವಿಕೆ ಮೊದಲಾದ ಪದಗಳು ಬಳಕೆಯಲ್ಲಿವೆ.

ಪ್ರೂಫ್ ರೀಡಿಂಗ್ ಪದಕ್ಕೆ ನಿಘಂಟುಗಳ ಪ್ರಕಾರ ಬಗೆಬಗೆಯ ಅರ್ಥಗಳಿವೆ.
ಕನ್ನಡ ನಿಘಂಟು (ಕಸಾಪ. ಪುಟ. ೧೫೩೪) ರಲ್ಲಿ ವಿವರಣೆ ಹೀಗಿದೆ.
**ಕರಡು, ಕರಡೆ, ಖರಡು** ೧. ಒರಟಾದ, ಒಡ್ಡಾದ, ನಯವಿಲ್ಲದ (ನಾ). ೨. ದೋಷ, ಕಳಂಕ.
**ಕರಡೆ:** ಕರಡೆ ಕಾಗದ (ಒರಟು ಕಾಗದ, ಉರುಟು ಕಾಗದ, ಕೋರಿ ಕಾಗದ) ಕರಡು > ಕರಡೆ.
**ಕರಡೋಲೆ** = ಅಚ್ಚಿನ ಕರಡು ಪ್ರತಿ
**ಕರಡೋಲೆಯೋದುಗ:** ಕರಡೋಲೆಯನ್ನು ಓದಿ ತಪ್ಪು ತಿದ್ದುವವನು.
**ಕರಡುಪ್ರತಿ:** ಕಚ್ಚಾಪ್ರತಿ, ತಿದ್ದುಪಡಿ ಆಗಬೇಕಾದ ಪ್ರತಿ.
**ಕರಡಚ್ಚು:** ಮುದ್ರಣವಾದ ಕಚ್ಚಾಪ್ರತಿ.

ಪ್ರೂಫ್‌ರೀಡಿಂಗ್, ಪ್ರೂಫ್‌ಷೀಟ್, ಪ್ರೂಫ್‌ರೀಡರ್, ಪ್ರೂಫ್‌ರೀಡ್ ಮೊದಲಾದ ಪದಗಳು ಕನ್ನಡದ ಪದಗಳಿಗೆ ಮೂಲವಾಗಿವೆ. ಆ ಇಂಗ್ಲಿಷ್ ಪದಗಳ ಅನುವಾದಗಳೇ ಕನ್ನಡದಲ್ಲಿ ಕರಡಚ್ಚು ತಿದ್ದುವುದು. ಕರಡಚ್ಚು ತಿದ್ದಣೆ, ಕರಡಚ್ಚು ಓದಿ ತಪ್ಪುಗಳನ್ನು ತಿದ್ದುವುದು, ಕರಡಚ್ಚಿನ ಹಾಳೆ, ಅಂತಿಮ ಮುದ್ರಣಕ್ಕೆ ಮುಂಚೆ ತಿದ್ದುಪಡಿಗೆ ಒದಗಿಸಿದ ಹಾಳೆ, ಕರಡುತಿದ್ದು. ಕರಡಚ್ಚು ತಿದ್ದು (ಕರಡು, ಕರಡಚ್ಚು ಪದಗಳನ್ನು ಒಂದೇ ಅರ್ಥದಲ್ಲಿ ಬಳಸಿದ್ದನ್ನು ಗಮನಿಸಿ) ಕರಡಚ್ಚು ತಿದ್ದುವವನು (ಳು) ಎಂಬ ಪದಗಳ ಅರ್ಥಗಳನ್ನು ಮೈವಿವಿ ಇಂ– ಕ. ನಿಘಂಟು, ಪ್ರಿಸಂ ಕ್ಲಿಷ್ಟ ಪದಗಳ ಕೋಶ ಮುಂತಾದವು ಕೊಟ್ಟಿವೆ. ಈ ಪದಗಳಷ್ಟೆ ಅಲ್ಲದೆ ಕರಡಚ್ಚು ತಿದ್ದುವ ಚಿಹ್ನೆಗಳೂ ಅವುಗಳ ಬಳಕೆ ರೀತಿಯೂ ಇಂಗ್ಲಿಷ್ ಪದ್ಧತಿಯಲ್ಲಿಯೇ ಕನ್ನಡಕ್ಕೆ ಬಂದಿದೆ. ಎಷ್ಟೋ ಕರಡಚ್ಚು ತಿದ್ದುಪಡಿ ಚಿಹ್ನೆಗಳಿಗೆ ಕನ್ನಡದಲ್ಲಿ ಹೆಸರುಗಳೇ ಇಲ್ಲ, ಇಂಗ್ಲಿಷ್ ಪದಗಳನ್ನೇ ಬಳಸುತ್ತೇವೆ.

**ಕರಡಚ್ಚುಗಾರರ ಸಮಸ್ಯೆಗಳು:** ಕರಡಚ್ಚು ತಿದ್ದುವುದು ಒಂದು ಕಲೆ. ಕರಡಚ್ಚು ತಿದ್ದುವ ಕಾರ್ಯದಲ್ಲಿ ಮೂವರ ಪಾತ್ರವಿದೆ. ಮೊಳೆ ಜೋಡಿಸುವವನು ಅಥವಾ ಡಿಟಿಪಿ ಮಾಡುವವನು, ಕರಡಚ್ಚು ತಿದ್ದುವವನು, ಅವನು ತೋರಿಸಿದ ಸರಿರೂಪಗಳನ್ನು ಮುದ್ರಣ ಪ್ರತಿಯಲ್ಲಿ ಅಳವಡಿಸುವವನು. ಈ ಮೂವರಲ್ಲಿ ಯಾರೊಬ್ಬರು ಕರ್ತವ್ಯಚ್ಯುತರಾದರೆ ಮುದ್ರಣದಲ್ಲಿ ದೋಷಗಳು ಉಳಿದೇ ಉಳಿಯುತ್ತವೆ. ಈ ಮೂವರೂ ಸಮನಾಗಿ ಸಮರ್ಥವಾಗಿ ಒಟ್ಟಿಗೆ ದಕ್ಷತೆಯಿಂದ ಕಾರ್ಯನಿರ್ವಹಿಸದೇ ಇರುವ ಸನ್ನಿವೇಶಗಳು ಹೆಚ್ಚಾಗಿ ಇರದು. ಕಿಸಾಗೋತಮಿ ಸಾವಿಲ್ಲದ ಮನೆಯಲ್ಲಿ ಸಾಸಿವೆ ತರಲು ಆಗದ ಹಾಗೆ ತಪ್ಪಿಲ್ಲದ ಮುದ್ರಣದ ಪುಸ್ತಕ, ಪತ್ರಿಕೆಯನ್ನು ಕಾಣುವುದು ಅತಿ ದುರ್ಲಭವಾಗಿದೆ.

ಮುದ್ರಣ ದೋಷಗಳು ಏಕಾಗುತ್ತವೆ ಎಂಬ ವಿಚಾರ ಚಿಂತನೀಯವಾಗಿದೆ. ಮುಖ್ಯವಾಗಿ, ಕರಡಚ್ಚು ತಿದ್ದುಗಾರರು ಎಂದರೆ ತಪ್ಪಿಲ್ಲ. ಏಕೆಂದರೆ ನಮ್ಮಲ್ಲಿ ಕರಡಚ್ಚುಗಾರರು ಬಹುಮಂದಿ ಹವ್ಯಾಸಿ ಕರಡಚ್ಚುಗಾರರು. ಎಲ್ಲೋ ಒಂದಿಬ್ಬರು ವೃತ್ತಿ ಕರಡಚ್ಚುಗಾರರು. ವೃತ್ತಿ ಕರಡಚ್ಚುಗಾರರಿಗೆ ಕೊಟ್ಟ ಸಂಬಳವಾಗಲಿ ಹವ್ಯಾಸಿ ಕರಡಚ್ಚುಗಾರರಿಗೆ ಕೊಡುವ ಪುಟದ ದರವಾಗಲಿ ತೀರಾ ಕನಿಷ್ಠ ಮಟ್ಟದ್ದು. ಹಾಗೆ ನೋಡಿದರೆ ಲೇಖಕನಿಗಿಂತ ಹೆಚ್ಚು ತಿಳಿವಳಿಕೆ ಅನುಭವ ಇರುವ ವಿಷಯ ಪರಿಣಿತ ಭಾಷಾ ಪರಿಚಿತ ಕರಡಚ್ಚುಗಾರನಾಗಿರುತ್ತಾನೆ. ಅವನಿಗೆ ಲೇಖಕನಿಗೆ ದೊರೆಯುವಷ್ಟು ಸಂಭಾವನೆ ದೊರೆಯುವುದಿಲ್ಲ. ತುಂಡು ಗುತ್ತಿಗೆಯಂತೆ, ದಿನಕೂಲಿಯಂತೆ ಪುಟದರದಲ್ಲಿ ಪ್ರಕಾಶಕರು ನೀಡುತ್ತಾರೆ. ನಮ್ಮಲ್ಲಿ ಬುದ್ಧಿಮತ್ತತೆಯ ಶೋಷಣೆಗಳಲ್ಲಿ ಇದೊಂದು. ಇದರ ಪರಿಣಾಮವಾಗಿ ಇಂದು ಸಮರ್ಥ ದಕ್ಷ ಅನುಭವಿ ಕರಡಚ್ಚುಗಾರರು ಅತ್ಯಲ್ಪಮಂದಿ ಇದ್ದಾರೆ. ಹಾಗಾಗಿ ಕರಡಚ್ಚು ತಿದ್ದುವ ಕಚ್ಚಾ ಪರಿಣಿತರು ಹೆಚ್ಚಾಗಿ ಮುದ್ರಣ ದೋಷಗಳು ಹೆಚ್ಚಾಗಿರುವುದು. ವಾಸ್ತವಸಂಗತಿ ಎರಡು. ಕರಡಚ್ಚುಗಾರರಿಗೆ ತಿದ್ದಲುಕೊಡುವ ಕಾಲಾವಧಿ ಸಾಕಾಗದು ಮತ್ತು ಕರಡಚ್ಚು ಹಾಳೆಗಳನ್ನು ಕೊಟ್ಟಾಗ ಅದರಲ್ಲಿ ತಪ್ಪುಗಳನ್ನು ತಿದ್ದಿ ಗುರುತಿಸಲು ಸಾಕಷ್ಟು ಖಾಲಿಜಾಗ ಬದಿಗಳಲ್ಲಿ ಇರುವುದಿಲ್ಲ. ಇನ್ನು ಲೇಖಕರು ಕೊಡುವ ಹಸ್ತಪ್ರತಿ ನೆರಳಚ್ಚು ಪ್ರತಿ ಆಗಿದ್ದರೆ ಸರಿಯಾಗಿ ನಕಲಾಗಿರುವುದಿಲ್ಲ. ಹಸ್ತಪ್ರತಿ ಆಗಿದ್ದರೆ ಲಿಪಿವಕ್ರತೆಯಿಂದ, ಲೇಖಕರ ಭಾಷಾ ಪಾಂಡಿತ್ಯದ ಕೊರತೆಯಿಂದ ಹೇರಳ ದೋಷಗಳಿದ್ದು ಅದನ್ನು ಡಿಟಿಪಿ ಮಾಡುವವರಿಗೆ ಸರಿಯಾಗಿ ಓದಲಾಗದೆ ಕರಡಚ್ಚು ಅಪಾರ ತಪ್ಪುಗಳಿಂದ ಕೂಡಿರುತ್ತದೆ. ಆಗ ೩ ಸಲ ಅಲ್ಲ ೬ ಸಲ ತಿದ್ದಿದರೂ ದೋಷಗಳು ಉಳಿದಿರುತ್ತವೆ.

ನಮ್ಮಲ್ಲಿ ಎಷ್ಟೋ ಜನಕ್ಕೆ ಹಸ್ತಪ್ರತಿಗಳನ್ನು ಸರಿಯಾಗಿ ಓದಿಕೊಂಡು ಟೈಪಿಸಲು ಬರುವುದಿಲ್ಲ. ಏಕೆಂದರೆ ಅವರಿಗೆ ಕನ್ನಡ ಭಾಷಾಜ್ಞಾನ, ವ್ಯಾಕರಣಗಳ ಪ್ರಾಥಮಿಕ ಸಂಗತಿಗಳ ಅರಿವೂ ಇಲ್ಲ. ಕಂಪ್ಯೂಟರಿನಲ್ಲಿ ಟೈಪಿಸುವ ಕೆಲಸಕ್ಕೆ ಬರುವವರಲ್ಲಿ ಬಹುಮಂದಿಗೆ ಕೇವಲ ಕೀಲಿಮಣೆ ಬಳಸುವುದಷ್ಟೆ ಗೊತ್ತು. ಕನ್ನಡ ಭಾಷೆ ವ್ಯಾಸಂಗ, ಗಂಧ ಇಲ್ಲದವರಾಗಿದ್ದಾರೆ. ಎಷ್ಟೋಜನ ಅನ್ಯಭಾಷಿಕರಾಗಿದ್ದಾರೆ. ಇವರಿಗೆ ಕನ್ನಡ ಭಾಷೆಯ ಪೂರ್ಣ ಪರಿಚಯವೇ ಇಲ್ಲ.



ಇನ್ನು ಎಷ್ಟೋ ಕಡೆ ಮೊದಲ ಕರಡಚ್ಚನ್ನು ಓದುವಾಗ ಹಸ್ತಪ್ರತಿಯನ್ನು ಓದಲು ಇನ್ನೊಬ್ಬ ವ್ಯಕ್ತಿ ಇರಬೇಕು. ಆದರೆ ಇರುವುದಿಲ್ಲ; ಎರಡನ್ನು ಒಬ್ಬರೇ ಓದುವುದರಿಂದ ಹಸ್ತಪ್ರತಿಯ ಕೆಲವು ಭಾಗಗಳು ಬಿಟ್ಟುಹೋಗುವ ಸಂದರ್ಭಗಳಿರುತ್ತವೆ.

Wrong font (size or style of type)

lower case letter

Set in LOWER CASE

capital letter

SET IN capitals

Set in lower case with INITIAL CAPITALS

SET IN small CAPITALS

SET IN SMALL CAPITALS with initial capitals

Set in roman type

Set in *italic type*

*SET IN ITALIC capitals*

Set in lightface type

**Set in boldface type**

**Set in boldface CAPITALS**

Superior letter

Inferior figure

**Position**

Move to right

Move to left

Center

Lower letters or words

Raise letters or words

Straighten type (horizontally

Align type (vertically)

Transpose

Transpose (order letters of or words)

**Spacing**

Insert lead (space) between lines

Take out lead

Close up: take out space

Close up partly: leave

ಕರಡಚ್ಚುಗಾರರ ಮತ್ತೊಂದು ಕಷ್ಟ ಎಂದರೆ ಲೇಖಕರ ನಿರ್ಬಂಧದ ನಿಯಮ. ಕೆಲವು ಲೇಖಕರು 'ನಾವು ಬರೆದುದನ್ನು ಏನೂ ಬದಲಿಸಬಾರದು' ಎಂದು ಕಟ್ಟಪ್ಪಣೆ ಮಾಡಿರುತ್ತಾರೆ. ಎಷ್ಟೋಸಲ ಕರಡಚ್ಚುಗಾರರು ಲೇಖಕರಿಗಿಂತ ಪಾಂಡಿತ್ಯವುಳ್ಳವರಾಗಿರುತ್ತಾರೆ. ಅಂಥ ಸಂದರ್ಭದಲ್ಲಿ ತಿದ್ದದೆ ಇರುವುದು ಹೇಗೆ? ಇದೊಂದು ಸಮಸ್ಯೆ.

ಲೇಖಕರೇ ಕರಡಚ್ಚುಗಾರರಾಗಿ ತಿದ್ದುವಾಗ ಈ ಸಮಸ್ಯೆ ಇರುವುದಿಲ್ಲ. ಆದರೆ ಎಲ್ಲ ಲೇಖಕರಿಗೂ ಕರಡಚ್ಚು ತಿದ್ದುವುದು ಬರುವುದಿಲ್ಲ. ಇನ್ನು ವಿದ್ವಾಂಸರ ಲೇಖನಗಳನ್ನು ಸಾಮಾನ್ಯರು ತಿದ್ದಿದಾಗ ಇಲ್ಲದ ದೋಷಗಳು ಉಂಟಾಗುತ್ತವೆ. ಕರಡಚ್ಚುಗಾರರು ಕರಡು ತಿದ್ದಲು ಸಾಕಷ್ಟು ಸಮಯ ಇಲ್ಲದೆ ಅವಸರದಲ್ಲಿ ತಿದ್ದಿದಾಗಲೂ ದೋಷಗಳು ಉಂಟಾಗುತ್ತವೆ. ಇಲ್ಲವೇ ದೋಷಗಳು ಉಳಿಯುತ್ತವೆ. ಕರಡಚ್ಚು ತಿದ್ದುವ ಜಾಗ ಏಕಾಂತವಾಗಿರಬೇಕು. ಅನೇಕ ಕಡೆಗಳಲ್ಲಿ ಜನ ಬಂದು ಹೋಗುವ ಜಾಗ ಆಗಿದ್ದು ಇತರರು ಮಾತಾಡಿಸಿದಾಗ ತಪ್ಪುಗಳು ಕರಡಚ್ಚು ತಿದ್ದುವಾಗ ತಪ್ಪುಗಳು ಆಗಲು ಅವಕಾಶ ಆಣುತ್ತದೆ.

ಎಲ್ಲ ದೋಷಗಳಿಗೂ ಕರಡಚ್ಚುಗಾರರೇ ಹೊಣೆಯಲ್ಲ. ಉದಾಹರಣೆಗೆ ಅಂತಿಮ ಕರಡನ್ನು ತಿದ್ದಿದ ಮೇಲೆ ಉಳಿದ ಕೆಲವೇ ತಪ್ಪುಗಳನ್ನು ತಿದ್ದಿದಾಗ ಅದನ್ನು ನಾವು ಸರಿಪಡಿಸಿಹಾಕಿಕೊಳ್ಳುತ್ತೇವೆ, ನೀವೇನು ಚಿಂತಿಸಬೇಡಿ ಎನ್ನುತ್ತಾರೆ. ಮಿಷನ್ ಪ್ರೂಫ್ ಯಂತ್ರದ ಮೇಲಿನ ಪ್ರತಿಯಲ್ಲಿ ದೋಷಗಳನ್ನು ತಿದ್ದಿದೆಯೇ ಇಲ್ಲವೇ ನೋಡಲಾಗದೆ, ಮುದ್ರಕರು ತಿದ್ದದೆ ತಪ್ಪುಗಳು ಹಾಗೆಯೇ ಉಳಿದುಬಿಡುತ್ತವೆ.

ಅನೇಕಸಲ ಕರಡು ತಿದ್ದುಗಾರರು ಸಾಲಿನ ಕೊನೆಯಲ್ಲಿ ಪದಚ್ಛೇದ ಸರಿಯಾಗಿದೆಯೇ ಇಲ್ಲವೇ ಎಂಬುದನ್ನು ಗಮನಿಸುವುದಿಲ್ಲ. ಕಾರ್ಯಕ್ರ-ಮಗಳನ್ನು ಮಂಗಳಾ-ರತಿಂಯನ್ನು ಇತ್ಯಾದಿ ಅರ್ಥಹೀನವಾಗಿ ಪದಚ್ಛೇದವಾಗಿರುವುದನ್ನು ಕಾಣಬಹುದು. ಇಂಥ ಸಾಲಿನ ಕೊನೆಯ ಪದಚ್ಛೇದಗಳಲ್ಲಿ ದೋಷವಿಲ್ಲದೆ ಅಚ್ಚಾದ ಗ್ರಂಥ ಎಂದರೆ ನನ್ನ ಗಮನಕ್ಕೆ ಬಂದಿದ್ದು ಚಿದಾನಂದಮೂರ್ತಿ ಅವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಮಹಾಪ್ರಬಂಧ. ಆದರೆ ಈ ಗ್ರಂಥದ ಪುನರ್ಮುದ್ರಣದಲ್ಲಿ ಈ ಶುದ್ಧತೆ ಕಾಣುವುದಿಲ್ಲ.

ಅನೇಕ ಸಂದರ್ಭಗಳಲ್ಲಿ ಕೇವಲ ಅಕ್ಷರದೋಷ, ಪದದೋಷಗಳನ್ನಷ್ಟೇ ಗಮನಿಸುವುದರ ಜತೆಗೆ ವಿಷಯದೋಷ ಗಮನಿಸಬೇಕು. ಇದಕ್ಕೆ ಅಗತ್ಯವಾದ

ಶಾಸ್ತ್ರಜ್ಞಾನ ಪಾರಿಭಾಷಿಕ ಪದಗಳ ಜ್ಞಾನ ಇರುವುದಿಲ್ಲ. ನನ್ನ ಒಂದು ಲೇಖನವನ್ನು ಅಚ್ಚುಮಾಡಿದ ಸಂಸ್ಥೆಯವರು ರೈಸರು ಹೇಳಿದಂತೆ ಎಂಬ ಮಾತು ರೈತರು ಹೇಳಿದಂತೆ ಎಂದು ಅಚ್ಚು ಮಾಡಿದ್ದರು. ಭಾಷಣದ ಧ್ವನಿಮುದ್ರಣವನ್ನು ವಿದ್ಯಾರ್ಥಿಗಳಿಂದ ಲಿಪೀಕರಣ ಮಾಡಿಸಿದ್ದರು. ಪಾಪ ಆ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯ ಚರಿತ್ರೆಯ ಪರಿಚಯ ಹೇಗಿರಲು ಸಾಧ್ಯ?

ಕನ್ನಡದಲ್ಲಿ ಇಂದು ಶಾಸ್ತ್ರಗ್ರಂಥಗಳ ಮತ್ತು ವಿಜ್ಞಾನಗ್ರಂಥಗಳ ಕರಡು ತಿದ್ದುವವರು ಸಿಗುವುದು ಕಷ್ಟ. ಏಕೆಂದರೆ ವ್ಯಾಕರಣ, ಸಂಗೀತ, ಉಪನಿಷತ್, ಭೌತವಿಜ್ಞಾನ, ಗಣಿತ, ಜ್ಯೋತಿಷ್ಯ ಇತ್ಯಾದಿ ಶಾಸ್ತ್ರಗ್ರಂಥಗಳ ಕರಡನ್ನು ತಿದ್ದುವವರಿಗೆ ಆಯಾ ಶಾಸ್ತ್ರ ಪರಿಚಯ ಅನಿವಾರ್ಯ. ಆ ರೀತಿ ಶಾಸ್ತ್ರಜ್ಞ ಕರಡಚ್ಚು ತಿದ್ದುವವರು ಸಿಗುವುದು ದುರ್ಲಭವಾಗಿದೆ.

ಜಿ.ಪಿ. ರಾಜರತ್ನಂ, ಡಿಎಲ್‌ಎನ್, ತೀನಂಶ್ರೀ, ಗೋವಿಂದ ಪೈ, ಡಿವಿಜಿ, ಎಆರ್‌ಕೃ ಮೊದಲಾದ ವಿದ್ವಾಂಸರು ತಮ್ಮ ಕೃತಿಗಳನ್ನು ತಾವೇ ತಿದ್ದುತ್ತಿದ್ದರು. ಅವರು ಬಹುಶಾಸ್ತ್ರವಿಶಾರದರಾಗಿದ್ದರು. ಇಂದು ಮುದ್ರಣಾಲಯಗಳಲ್ಲಿ ಪತ್ರಿಕಾಲಯಗಳಲ್ಲಿ ಕರಡಚ್ಚು ತಿದ್ದುವವರು ಬಹುಮಂದಿ ಹೊಸಗನ್ನಡ ಗದ್ಯದ ಕತೆ ಕಾದಂಬರಿ ನಾಟಕ ಪ್ರಬಂಧ ಇತ್ಯಾದಿ ಬರಹಗಳನ್ನು ತಿದ್ದುವವರೇ ಹೆಚ್ಚಾಗಿದ್ದಾರೆ. ಪತ್ರಿಕೋದ್ಯಮ ಪಾಠದಲ್ಲಿ ಶಾಸ್ತ್ರಜ್ಞರಾಗಿ ಕರಡುತಿದ್ದುವವರನ್ನು ಸಿದ್ಧಪಡಿಸುವ ಪಠ್ಯವಿಲ್ಲ ಎಂದು ನನ್ನ ಎಣಿಕೆ.

ಕರಡಚ್ಚುಗಾರರು ಪದ ವಾಕ್ಯ ಅಕ್ಷರ ತಿದ್ದುವುದರ ಜತೆಗೆ ಮತ್ತೊಮ್ಮೆ ಓದಿ ಅರ್ಥದೋಷಗಳನ್ನು ಹುಡುಕಿ ತಿದ್ದಬೇಕು. ಅನೇಕರು ಇದನ್ನು ಮಾಡುವುದಿಲ್ಲ. ರಾಯಚೂರಿನಲ್ಲಿ ನನ್ನ ಭಾಷಣದ ಕಾರ್ಯಕ್ರಮವನ್ನು ಪತ್ರಿಕೆಯೊಂದು ಪ್ರಕಟಿಸಿದ್ದು ಹೀಗೆ: ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಇಂದು ಸಂಜೆ ನಗರದಲ್ಲಿ ಉಪವಾಸ ಮಾಡುತ್ತಾರೆ. (ಉಪನ್ಯಾಸ ಎನ್ನುವ ಬದಲು. ಅಕ್ಷರದೋಷವನ್ನಷ್ಟೆ ನೋಡಲು ಹೋದಾಗ ವಾಕ್ಯದೋಷ, ಅರ್ಥದೋಷ ಕಣ್ಣಿಗೆ ಬೀಳುವುದು ಕಷ್ಟ.)

ಆಧುನಿಕ ಮುದ್ರಣ ಪದ್ಧತಿಯಲ್ಲಿ ಕಂಡುಬರುವ ದೊಡ್ಡ ದೋಷವೆಂದರೆ ಪದಗಳ ನಡುವೆ ತೆರಪು (space) ಕೊಡುವ ರೀತಿ. ಎಲ್ಲ ಪದಗಳ ನಡುವೆ ಸಮಾನ ತೆರಪು ಈಕ್ವಲ್ ಸ್ಪೇಸ್ ಕೊಡುವುದರಿಂದ ಅರ್ಥಹೀನ ಪದವಿಭಜನೆ ಆಗಿ ಕನ್ನಡ ಭಾಷೆಯ ಸೊಗಸು ಜಾಯಮಾನ ಮಾಯವಾಗುತ್ತದೆ. ಈ ಬಗ್ಗೆ ಎಚ್ ನರಸಣ್ಣ ಅವರು ತಮ್ಮ 'ಮುದ್ರಣ ಸಮೀಕ್ಷೆ' ಗ್ರಂಥದಲ್ಲಿ (೧೯೭೦) ಕರಡುಪ್ರತಿ ತಿದ್ದುವ ವಿಧಾನ ಲೇಖನದಲ್ಲಿ ಹೇಳಿರುವ ಮಾತಿದು: 'ಪದಗಳ ನಡುವೆ ತೆರವು ಕೊಡುವ ವಿಚಾರವಾಗಿ ಹೇಳುವುದಾದರೆ, ಇಂಗ್ಲಿಷಿನ ಪುಸ್ತಕಗಳಲ್ಲಿ ಪದಗಳ ನಡುವೆ ಈಕ್ವಲ್ ಸ್ಪೇಸ್, ಸಮಾನ ತೆರವು ಕೊಡಲಾಗುತ್ತದೆ, ಇದು ಕನ್ನಡ ಜಾಯಮಾನಕ್ಕೆ ಗೊತ್ತಿಲ್ಲ. ಕನ್ನಡ ಭಾಷೆಯಲ್ಲಿ ಪದಗಳ ಮಧ್ಯೆ ತೆರವು ಕೊಡುವಾಗ ಎಲ್ಲ ಕಡೆ ಸಮಾನ ತೆರವು ಇರಬೇಕಿಲ್ಲ. ಕೆಲವು ಪದಗಳ ಮಧ್ಯೆ ೧/೨M ಸ್ಥಳ ಬಿಟ್ಟರೆ ಕೆಲವು ಪದಗಳ ನಡುವೆ ೧/೪M ಸ್ಥಳ ಬಿಡುವುದು ಸೂಕ್ತ. ಈ ತೆರವು ಕೊಡುವ ಕೆಲಸ ಅರ್ಥಕ್ಕೆ, ಭಾವಕ್ಕೆ ತಕ್ಕಂತೆ ಇರುತ್ತದೆ. ಆ ಈ ಅಕ್ಷರಬಿಟ್ಟು ಉಳಿದ ೨ ಅಥವಾ ಹೆಚ್ಚಿನ ಅಕ್ಷರಗಳ ಪದಗಳಲ್ಲಿ ಒಂದಕ್ಷರ ಬೇರೆಯಾಗಿ ಬರುವಂತೆ ಒಡೆಯಬಾರದು.' ಕರಡಚ್ಚನ್ನು ತಿದ್ದುವ ತರಬೇತಿ ಇಲ್ಲದೆ ಬಹುಮಂದಿ ಕರಡಚ್ಚುಗಾರರು ತಮಗೆ ತಾವೇ ಅಲ್ಲಿ ಇಲ್ಲಿ ನೋಡಿ ಕಲಿತ ಏಕಲವ್ಯಗೋತ್ರದವರಾದ ಕಾರಣ ಕರಡಚ್ಚು ತಿದ್ದುವುದರಲ್ಲಿ ಒಂದು ಕ್ರಮವಿಲ್ಲದೆ ಎಷ್ಟೋ ಸಲ ಕರಡಚ್ಚು ತಿದ್ದುಗಾರರು ಬಳಸುವ ಚಿಹ್ನೆಗಳೂ ಅದನ್ನು ಅಚ್ಚಿನಲ್ಲಿ ಸರಿಪಡಿಸುವವರಿಗೆ ಸರಿಯಾಗಿ ಅರ್ಥವಾಗದೆ ಹಲವಾರು ತಪ್ಪುಗಳಾಗುತ್ತವೆ.

ಹೀಗೆ ಕರಡಚ್ಚು ತಿದ್ದುವವರಿಗೂ ಅದನ್ನು ಮುದ್ರಣದಲ್ಲಿ ಸರಿಪಡಿಸುವವರಿಗೂ ಸಮಸ್ಯೆಯೇ ಇಲ್ಲದ ಸಂದರ್ಭವೆಂದರೆ ಹಿಂದಿನಕಾಲದ ಮೊಳೆ ಜೋಡಿಸುವ ಪದ್ಧತಿಯಲ್ಲಿ ಕೆಲವು ವಿದ್ವಾಂಸರು ತಾವೇ ಮೊಳೆ ಜೋಡಿಸಿಕೊಡುತ್ತಿದ್ದರು ಮುದ್ರಕರಿಗೆ. ಉದಾಹರಣೆಗೆ ಹೊಳೆಕಲ್ಲು ನರಸಿಂಹಯ್ಯನವರ ವಿಚಾರದರ್ಪಣ ಪ್ರೆಸ್ ಬೆಂಗಳೂರಿನಲ್ಲಿ ಅತ್ಯಂತ ಹಳೆಯ ಮುದ್ರಣಾಲಯಗಳಲ್ಲಿ ಒಂದು. ಅಲ್ಲಿ ಪಂಡಿತರು ಮೊಳೆ ಜೋಡಿಸಿ ಸಂಸ್ಕೃತ ಸ್ತೋತ್ರಗ್ರಂಥಗಳನ್ನು, ಆದಿತ್ಯ ಹೃದಯ ಇತ್ಯಾದಿ ಹಾಗೂ ಅಮರಕೋಶದಂಥ ಗ್ರಂಥಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಅವರು ಸ್ವತಃ

ಷಿ

ಘನವಿದ್ವಾಂಸರಾಗಿದ್ದು ಪಠ್ಯ ಬಾಯಿಗೆ ಬರುತ್ತಿದ್ದುದರಿಂದ ಅದನ್ನು ಅವರೇ ಮೊಳೆ ಜೋಡಿಸುತ್ತಿದ್ದುದರಿಂದ ಕರಡಚ್ಚು ತಿದ್ದುವ ಪ್ರಮೇಯವೇ ಬರುತ್ತಿರಲಿಲ್ಲ. ಆಧುನಿಕ ಕಾಲದಲ್ಲಿ ಲೇಖಕರೇ ಡಿಟಿಪಿ ಮಾಡಿದಾಗ ಅಚ್ಚಿನಲ್ಲಿ ದೋಷ ಅತಿಕಡಿಮೆ ಆಗಿರುತ್ತದೆ. ಇನ್ನು ಕಲ್ಲಚ್ಚು ಮುದ್ರಣದಲ್ಲಿ ಶಾಸನಗಳ ಪಡಿಯಚ್ಚು ತೆಗೆದಾಗ ನೆರಳಚ್ಚು ಪ್ರತಿ (ಕ್ಸರಾಕ್ಸ್) ತೆಗೆದಾಗ ಕರಡಚ್ಚು ತಿದ್ದುವ ಪ್ರಮೇಯವಿರುವುದಿಲ್ಲ. ಅಥವಾ ಸಚಿತ್ರಮುದ್ರಣ ಮಾಡಿದಾಗಲೂ ಅಷ್ಟೆ. ಪುನರ್ಮುದ್ರಣವನ್ನು ಚಿತ್ರಮುದ್ರಣ ಮಾಡಿದಾಗ ಕರಡುತಿದ್ದುವ ಪ್ರಮೇಯವಿಲ್ಲದಿದ್ದರೆ ಹಳೆಯ ಅಚ್ಚಿನ ತಪ್ಪುಗಳು ಹಾಗೆಯೇ ಉಳಿದಿರುತ್ತದೆ. ಅಚ್ಚಾದಮೇಲೆ ಗಮನಕ್ಕೆ ಬಂದ ತಪ್ಪುಗಳನ್ನು ತಿದ್ದಲಾಗದಿದ್ದರೂ ಅದನ್ನು ತಿದ್ದೋಲೆಯಾಗಿ ಗ್ರಂಥದ ಕೊನೆಯಲ್ಲಿ ಕೊಡುವ ಪರಿಪಾಟವಿತ್ತು. ಈಗ ಅದೂ ಕಾಣುವುದಿಲ್ಲ. ವಿಪರೀತ ಪದದೋಷ, ಅರ್ಥದೋಷ, ವಿಷಯದೋಷ ಆದಾಗ, ಪುಸ್ತಕವನ್ನೇ ಮತ್ತೆ ತಿದ್ದಿ ಪ್ರಕಟಿಸಿದ ಪ್ರಸಂಗಗಳೂ, ಪುಸ್ತಕವನ್ನು ಬಹಿಷ್ಕರಿಸಿದ ಪ್ರಸಂಗಗಳೂ ಉಂಟು.

ಮುದ್ರಣ ವಿನ್ಯಾಸದ ಪರಿಚಯ, ಅಕ್ಷರಗಳ ಗಾತ್ರ ಪರಿಚಯ ಕರಡಚ್ಚುಗಾರರಿಗೆ ಇಲ್ಲದೆ ಅನೇಕ ದೋಷಗಳಾಗುವುದುಂಟು. ಸಾಮಾನ್ಯವಾಗಿ ಕರಡಚ್ಚು ತಿದ್ದುವವರಿಗೆ ಮುದ್ರಣಕಲೆಯ ಅಕ್ಷರಗಾತ್ರ ವಿಚಾರ ತಿಳಿದಿರುವುದಿಲ್ಲ. ಅದನ್ನು ವಿನ್ಯಾಸಕಾರರಿಗೆ ಬಿಟ್ಟುಬಿಡುತ್ತಾರೆ. ಆದರೆ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಂಥ ಗ್ರಂಥಗಳ ಕರಡು ತಿದ್ದುವವರಿಗೆ, ಶಾಸ್ತ್ರಗ್ರಂಥಗಳನ್ನು ತಿದ್ದುವವರಿಗೆ ಇದರ ಪರಿಜ್ಞಾನ ಅತ್ಯಗತ್ಯ. ಕನ್ನಡ ನಿಘಂಟಿನಲ್ಲಿ ಸಂಪಾದಕರು ವೈಜ್ಞಾನಿಕ ಕ್ರಮವೊಂದನ್ನು ಬಳಸಿದ್ದಾರೆ. ಮುಖ್ಯಪದದ ಅಕ್ಷರಗಾತ್ರ, ಪ್ರಯೋಗಗಳ ಗಾತ್ರ, ಆಕರಗ್ರಂಥಗಳ ಅಕ್ಷರಗಾತ್ರ, ಪದಮೂಲ ಸೂಚನೆಯ ಪದಗಳ ಗಾತ್ರ ಇತ್ಯಾದಿಗಳನ್ನು ಚಿಕ್ಕಕ್ಷರ, ದಪ್ಪಕ್ಷರ (ಸ್ಮಾಲ್, ಬೋಲ್ಡ್) ಅಕ್ಷರಗಳು ಯಾವುದಿರಬೇಕು ಎಂದು ನಿರ್ಧರಿಸಿರುತ್ತಾರೆ. ಅದನ್ನು ಗಮನಿಸದೆ ಕರಡಚ್ಚು ತಿದ್ದಲು ಸಾಧ್ಯವಿಲ್ಲ. ಈ ಎಲ್ಲ ವಿಷಯಗಳಲ್ಲಿ ಮುದ್ರಣವಿಚಾರ, ಕರಡಚ್ಚು ವಿಚಾರ, ಹಸ್ತಪ್ರತಿ ವಿಚಾರ, ಮೊಳೆಗಳ ವಿನ್ಯಾಸ, ವಿಚಾರ ಇತ್ಯಾದಿ ಎಲ್ಲವನ್ನು ತಿಳಿದ ಕರಡಚ್ಚುಗಾರರು ಶೇಷನಾರಾಯಣರಂಥ ಲೇಖಕರು ಮುದ್ರಕರು ಕರಡಚ್ಚುಗಾರರು ವಿರಳರಾಗಿದ್ದಾರೆ. ಅವರು ಹೇಳಿದ ಮಾತಿದು (ಮಯೂರ ೨೦೦೧ನೆಯ ಸಂಚಿಕೆ ನೋಡಿ) "ನಾನು ಮುದ್ರಣ ಮಾಡಿರುವ ಪ್ರೂಫ್ ನೋಡಿರುವ ಪುಸ್ತಕಗಳ ಸಂಖ್ಯೆ ಸಾವಿರಕ್ಕೂ ಹೆಚ್ಚು ಮೀರುತ್ತದೆ. ಪುಸ್ತಕಗಳನ್ನು ಅಚ್ಚುಮಾಡುವುದರ ಜತೆಗೆ ಪ್ರೂಫ್ ನೋಡುವುದರಲ್ಲಿ ನಾನು ಗಟ್ಟಿಗ ಎಂದು ಎಷ್ಟೋ ಪ್ರಕಾಶಕರು ತಮ್ಮ ಪ್ರಕಾಶನದ ಪುಸ್ತಕಗಳನ್ನು ನನಗೆ ಪ್ರೂಫ್ ತಿದ್ದಲು ಕೊಡುತ್ತಿದ್ದರು." ಕುವೆಂಪು, ತೀನಂಶ್ರೀ, ಡಿಎಲ್ಎನ್, ಡಿವಿಜಿ, ಮಾಸ್ತಿ, ವಿಸೀ, ರಾಜರತ್ನಂ, ಅನಕೃ, ತರಾಸು, ತ್ರಿವೇಣಿ ಮೊದಲಾದವರ ಗ್ರಂಥಗಳನ್ನು ಪ್ರೂಫ್ ನೋಡಿ ಅಂದಚೆಂದದಿಂದ ತಪ್ಪಿಲ್ಲದೆ ಮುದ್ರಿಸಿ ಭೇಷ್ ಎನಿಸಿಕೊಂಡವರು ಶೇಷನಾರಾಯಣ ಅವರು. ಅವರು ಸ್ವತಃ ಲೇಖಕರೂ ಹೌದು.

ಕನ್ನಡದಲ್ಲಿ ಕರಡಚ್ಚು ತಿದ್ದುವ ವಿಧಾನದಲ್ಲಿ ಏಕರೂಪತೆ ಇಲ್ಲ. ಕಾರಣ ಸ್ಪಷ್ಟವಾಗಿದೆ. ಕರಡು ತಿದ್ದುವ ವಿಚಾರದಲ್ಲಿ ಪರಿಪೂರ್ಣವಾದ ಪಠ್ಯಗ್ರಂಥವೇ ಇಲ್ಲ. ಅಲ್ಲಿ ಇಲ್ಲಿ ಪ್ರಕಟವಾದ ಕೆಲವು ಲೇಖನಗಳು ಮತ್ತು ಕರಡಚ್ಚು ಚಿಹ್ನೆಗಳ ಪಟ್ಟಿ ಬಿಟ್ಟರೆ ಬೇರೆ ಇಲ್ಲ. ಇನ್ನು ಕರಡಚ್ಚು ತಿದ್ದುವ ತರಬೇತಿ ಕೊಡುವ ಶಾಲೆ ಆಗಲಿ, ಶಿಬಿರಗಳಾಗಲಿ ನಡೆದೇ ಇಲ್ಲ.

ಕರಡಚ್ಚು ತಿದ್ದಲು ನೆರವಾಗುವ ಚಿಹ್ನೆಗಳನ್ನು ತಿಳಿಸುವ ಕೋಶಗಳು ಗ್ರಂಥಗಳು ಕನ್ನಡದಲ್ಲಿ ಕೆಲವಿವೆ.
೧. ಕಸಾಪದ ಕನ್ನಡ ನಿಘಂಟು ಪೀಠಿಕೆ, ೨. ಕನ್ನಡ ರತ್ನಕೋಶ (ಕಸಾಪ). ೩. ಜಿ. ವೆಂಕಟಸುಬ್ಬಯ್ಯನವರ ಪ್ರಿಸಂ ಕ್ಲಿಷ್ಟಪದಕೋಶ, ೪. ಡಿ.ಕೆ. ಭಾರದ್ವಾಜರ ಇಂ-ಕ ಶಬ್ದಕೋಶ, ೫. ಗ್ರಂಥಸಂಪಾದನೆ-ಡಿಎಲ್ಎನ್, ೬. ರನ್ನನ ಗದಾಯುದ್ಧ ಸಂಗ್ರಹ- ತೀನಂಶ್ರೀ, ೭. ಕನ್ನಡ ಗ್ರಂಥ ಸಂಪಾದನಾ ಶಾಸ್ತ್ರ-ಎಂ.ಎಂ. ಕಲ್ಬುರ್ಗಿ, ೮. ಗ್ರಂಥ ಸಂಪಾದನ ಪರಿಭಾಷಾ ಕೋಶ, ೯. ಆಧುನಿಕ ಮುದ್ರಣಕಲೆ-ಹರಿದಾಸ್, ೧೦. ಅಕ್ಷರ ಮುದ್ರಣ-ಕೃಷ್ಣಾಜಿರಾವ್, ೧೧. ಮುದ್ರಣಕಲೆ-ನರಸಣ್ಣ, ೧೨. ಕನ್ನಡಶೈಲಿ ಕೈಪಿಡಿ-ಇತ್ಯಾದಿ ಮತ್ತು ಕೆಲವು ಲೇಖನಗಳು ಈ ವಿಷಯದಲ್ಲಿ ಉಪಯುಕ್ತವಾಗಿವೆ. ಇಷ್ಟಾದರೂ ಕಲಿಯುವವರಿಗೆ ಸೂಕ್ತ ಗ್ರಂಥ ಇಲ್ಲ. ಕ್ರಮಬದ್ಧವಾಗಿ ಕರಡಚ್ಚು ತಿದ್ದುವುದನ್ನು ಕಲಿಸುವ ವ್ಯವಸ್ಥೆಯಿಲ್ಲ. ಇಂದಿಗೂ ಭಾಷಾಶುದ್ಧಿ ಬಗ್ಗೆ ಕರಡಚ್ಚು ತಿದ್ದುವವರು ಗಮನಿಸಬೇಕಾದ ಕೆಲವು ಗ್ರಂಥಗಳಿವೆ. ಅವುಗಳ ಅಧ್ಯಯನ ಅವರಿಗೆ ಅತ್ಯಗತ್ಯ. ಉದಾಹರಣೆಗೆ:

೧. ಶುದ್ಧಾಶುದ್ಧ ಕನ್ನಡ – ಪ್ರೊ. ಎಂ. ರಾಜಗೋಪಾಲಾಚಾರಿ, ಮುಂಬೈ ವಿಶ್ವವಿದ್ಯಾಲಯ, ೧೯೯೦.
೨. ಇಂದಿನ ಕನ್ನಡ ರಚನೆ ಮತ್ತು ಬಳಕೆ, ಡಾ. ಎಸ್.ಎನ್. ಶ್ರೀಧರ್, ಕವಿವಿ ಹಂಪಿ.
೩. ಕನ್ನಡಶೈಲಿ – ಎಸ್.ಎನ್. ಶ್ರೀಧರ್.

೪. ನುಡಿಸಿರಿ–ನಡೆಸಿರಿ, ಸತ್ಯನಾರಾಯಣ ಮಲ್ಲಿಪಟ್ಟಣ, ಮಂಗಳ ಪ್ರಕಾಶನ, ೧೯೯೮.
೫. ಪರಿಶುದ್ಧ ಕನ್ನಡ, ಅರಳುಗಪ್ಪೆ, ೧೯೮೨, ಸಮಾಜ ಪುಸ್ತಕಾಲಯ.
೬. ದರ್ಪಣ ವಿವರಣ – ಟಿ.ವಿ. ವೆಂಕಟಾಚಲಶಾಸ್ತ್ರೀ
೭. ಇಗೋ ಕನ್ನಡ – ೩ ಸಂಪುಟಗಳು – ಜಿ. ವೆಂಕಟಸುಬ್ಬಯ್ಯ.
೮. ಪದಾರ್ಥ ಚಿಂತಾಮಣಿ – ಪಾವೆಂ ಆಚಾರ್ಯ, ನವ ಕರ್ನಾಟಕ ಪ್ರಕಾಶನ, ೧೯೯೪.
೯. ಕನ್ನಡ ನಿಘಂಟು ಪೀಠಿಕೆ – ಕಸಾಪ.
೧೦. ಶಂಕರಭಟ್ಟರ ಕನ್ನಡಭಾಷೆಯನ್ನು ಕುರಿತ ೮ ಗ್ರಂಥಗಳು.
೧೧. ಕೆ.ವಿ. ನಾರಾಯಣ ಅವರ ನಮ್ಮ ಸುತ್ತಮುತ್ತ ಇತ್ಯಾದಿ ಗ್ರಂಥಗಳು.
೧೨. ಧಾರವಾಡಕರ ಅವರ ಕನ್ನಡ ಭಾಷಾಶಾಸ್ತ್ರ
೧೩. ಎಂ.ಎಚ್. ಕೃಷ್ಣಯ್ಯನವರ ಸಂಕ್ಷಿಪ್ತ ಕನ್ನಡ ಭಾಷಾಶಾಸ್ತ್ರ.
೧೪. ಡಿಎಲ್‌ನ ಅವರ ಶಬ್ದವಿಹಾರ.
೧೫. ರಂಗನಾಥ ಶರ್ಮರ ಹೊಸಗನ್ನಡ ವ್ಯಾಕರಣ.
೧೬. ಟಿ. ಕೇಶವಭಟ್ಟರ ಕನ್ನಡ ವ್ಯಾಕರಣ ಇತ್ಯಾದಿ.

ಇದುವರೆಗೆ ವಿಶೇಷವಾಗಿ ಪುಸ್ತಕದ ಪಠ್ಯದ ಸಂಗತಿಗಳ ಬಗ್ಗೆ ಹೇಳಲಾಯಿತು.
ಕರಡಚ್ಚು ತಿದ್ದುವವರು ಗ್ರಂಥದಲ್ಲಿ ಗಮನಿಸಬೇಕಾದ ಭಾಗಗಳು ಮೂರು ಇವೆ.

೧. ಪೀಠಿಕಾ ಪುಟಗಳು (ಮೊದಲ ೧೬ ಅಥವಾ ೮ ವಿವರಗಳ ಪುಟಗಳು) ಮುದ್ರಣವಿವರ, ಅರ್ಪಣೆ, ಲೇಖಕರ ಪೀಠಿಕೆ, ಪ್ರಕಾಶಕರ ನುಡಿ, ಇತರರ ಮುನ್ನುಡಿ, ವಿಷಯಸೂಚಿ ಇತ್ಯಾದಿ)
೨. ಪಠ್ಯದ ಭಾಗ
೩. ಅನುಬಂಧಗಳು (ಮುಖ್ಯ ಪದಸೂಚಿ, ಗ್ರಂಥ ಲೇಖನಸೂಚಿ, ವಂಶಾವಳಿ, ಇತ್ಯಾದಿ ಅನೇಕ ಅನುಬಂಧಗಳು) ಇವುಗಳಲ್ಲಿ ಪೀಠಿಕಾಪುಟಗಳು ಮತ್ತು ಅನುಬಂಧಗಳ ವಿಚಾರವಾಗಿ ಕರಡಚ್ಚುಗಾರರಿಗೆ ಸಂಬಂಧಿಸಿದಂತೆ ಕೆಲವು ಸಂಗತಿಗಳನ್ನು ಹೇಳಬೇಕಾಗಿದೆ.

ಪೀಠಿಕಾ ಪುಟಗಳಿಗೆ ರೋಮನ್ ಅಂಕಿಗಳನ್ನು (ಸಣ್ಣದು ಅಥವಾ ದೊಡ್ಡದು I II III ......i ii iii ಇತ್ಯಾದಿ) ಬಳಸುತ್ತಾರೆ. ಈ ಪದ್ಧತಿ ವಿದೇಶಿ ಪದ್ಧತಿಯ ಅಂಧಾನುಕರಣೆ. ಕನ್ನಡಕ್ಕೆ ಅನಿವಾರ್ಯವಾದ ಪದ್ಧತಿ ಅಲ್ಲ. ಹೊಸಕೆರೆ ಚಿದಂಬರಯ್ಯನವರು ನೂರಕ್ಕೂ ಹೆಚ್ಚು ಗ್ರಂಥಗಳನ್ನು, ವಿವಿಧ ವಿಷಯಗಳನ್ನು ಕುರಿತು ರಚಿಸಿದ ವಿದ್ವಾಂಸರು; ಹೊಸಗನ್ನಡ ಗದ್ಯ ನಿರ್ಮಾಪಕರಲ್ಲಿ ಒಬ್ಬರು. ಇವರು ತಮ್ಮ ಗ್ರಂಥಗಳಲ್ಲಿ ಪೀಠಿಕಾ ಪುಟಗಳಿಗೆ ಅಆಇಈ, ಕಖಗಘಙ ಇತ್ಯಾದಿ ಕನ್ನಡ ವರ್ಣಮಾಲೆಯನ್ನು ಬಳಸಿದ್ದಾರೆ. ಇದನ್ನು ನಮ್ಮ ಇತರ ಲೇಖಕರು, ಮುದ್ರಕರು ಯಾರೂ ಬಳಸದೆ ರೋಮನ್ ಅಂಕೆಗಳನ್ನು ಬಳಸುತ್ತಿರುವುದು ನಮ್ಮ ಕನ್ನಡತನದ ದೃಷ್ಟಿಯಿಂದ ಕನ್ನಡಭಾಷೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ಯೋಚಿಸದೆ ಇರುವುದಕ್ಕೆ ಇದೊಂದು ನಿದರ್ಶನ. ಕನ್ನಡ ಶೀಘ್ರಲಿಪಿ, ಕನ್ನಡ ಬೆರಳಚ್ಚಿನ ಕೀಲಿಮಣೆಗಳಲ್ಲೂ ಯಾಂತ್ರಿಕವಾಗಿ ಅಂಧಾನುಕರಣೆ ಮಾಡಿದ್ದರಿಂದ ಅವು ನಮ್ಮ ಅಗತ್ಯಗಳನ್ನು ಪೂರೈಸುವಲ್ಲಿ ಪರಿಪೂರ್ಣವಾಗಿಲ್ಲ.

ಇನ್ನು ಅನುಬಂಧಗಳಲ್ಲಿ ವಿಷಯ ಪದಸೂಚಿ, ಅಕಾರಾದಿ ಪದಸೂಚಿ, ಲೇಖಕಸೂಚಿ, ಗ್ರಂಥಸೂಚಿ ಇತ್ಯಾದಿ ಕೊಡುವಾಗ, ಟಿಪ್ಪಣಿಗಳನ್ನು ಕೊಡುವಾಗ ಅವುಗಳ ಸಂಖ್ಯೆ ಪಠ್ಯದಲ್ಲಿರುವ ಸಂಖ್ಯೆಗಳನ್ನು ಅಥವಾ ಆಯಾ ವಿಷಯಗಳು ಬರುವ ಪುಟಗಳ ಸಂಖ್ಯೆ ಇರುವುದನ್ನು ಕರಡಚ್ಚುಗಾರರು ಪರಿಶೀಲಿಸಬೇಕು. ಇಲ್ಲದಿದ್ದಲ್ಲಿ ಸಂಶೋಧಕರಿಗೆ ಈ ಗ್ರಂಥಗಳನ್ನು ಬಳಸುವಾಗ ತೊಂದರೆ ಆಗುತ್ತದೆ. ೧೪–೩ ಎಂಬುದು (೧೪ನೇ ಅಧ್ಯಾಯ ೩ನೇ ಪದ್ಯ) ೩–೧೪ ಎಂದಾದರೆ ಎಷ್ಟು ಅನರ್ಥವಾಗುತ್ತದೆ. ಗ್ರಂಥಗಳು ಪುನರ್ಮುದ್ರಣವಾದಾಗ ಅಚ್ಚಿನ ಪುಟಗಳ ಸಂಖ್ಯೆ ವ್ಯತ್ಯಾಸವಾದಾಗ ಅವುಗಳನ್ನು ಮೊದಲ ಮುದ್ರಣದ ಸಂಖ್ಯೆಗಳನ್ನು ಬಿಟ್ಟು ಹೊಸಮುದ್ರಣದ ಪುಟಗಳಿಗೆ ಹೊಂದಿಸುವಾಗ ಕರಡಚ್ಚುಗಾರ ಎಚ್ಚರವಾಗಿ ಪರಿಶೀಲಿಸಿ ತಿದ್ದಬೇಕು. ಇದು ಅತಿಶ್ರಮದ ಕೆಲಸ. ಇನ್ನು ಅಕಾರಾದಿ ಪದಕೋಶಗಳನ್ನು ಅನುಬಂಧದಲ್ಲಿ ಕೊಟ್ಟಾಗ ಅವು ನಿಘಂಟಿನ ಪ್ರಕಾರ ಅಕಾರಾದಿ ಕ್ರಮ ಸರಿಯಾಗಿದೆಯೇ ಎಂಬುದನ್ನು ಪರಿಶೀಲಿಸಬೇಕು.

ವಂಶಾವಳಿ ಇತ್ಯಾದಿ ನಕ್ಷೆಗಳು ಇದ್ದಾಗ ಎಚ್ಚರದಿಂದ ಗಮನಿಸಬೇಕು. ಇತ್ತೀಚೆಗೆ ನಾನೊಂದು ಪುಸ್ತಕದ ಕರಡನ್ನು ತಿದ್ದಿದಾಗ ಲೇಖಕರ ವಂಶಸ್ಥರ ವಂಶಾವಳಿಯನ್ನು ಉದ್ದುದ್ದ ಇದ್ದುದನ್ನು ಮಡಿಚಿ ಅಡ್ಡಾಅಡ್ಡವಾಗಿ ತಿರುಗಿಸಿ ಅಚ್ಚು ಮಾಡಿದಾಗ ಮಕ್ಕಳಲ್ಲಿ ಒಬ್ಬರ ಹೆಸರು ಬಿಟ್ಟು ಹೋಯಿತು. ಆಗ ಅವರು ತೀವ್ರವಾಗಿ ಆಕ್ಷೇಪಿಸಿದ್ದರಿಂದ ಮತ್ತೆ ಅಚ್ಚು ಮಾಡಿ ೧೦೦೦೦ ಪ್ರತಿಗಳಿಗೆ ಅಂಟಿಸಲಾಯಿತು. ಕರಡಚ್ಚುಗಾರರು ಮತ್ತು ಮುದ್ರಕರು ಇಬ್ಬರು ಗಮನಿಸದೆ ಇದ್ದುದರಿಂದ ಆದ ತಪ್ಪಿದು.

ಇನ್ನು ಚಿತ್ರಗಳ ಸಂಖ್ಯೆ ಅವುಗಳ ಶೀರ್ಷಿಕೆಗಳನ್ನು ಚೆನ್ನಾಗಿ ಗಮನಿಸಬೇಕು. ಹಾಲು ಕಾಗದದ ಮೇಲೆ ಅಚ್ಚಾದ ಶೀರ್ಷಿಕೆಗಳ ಕರಡಚ್ಚನ್ನು ತಿದ್ದುವಾಗ ಸಾಮಾನ್ಯ ಶಾಯಿ ಆರ್ಟ್‌ಪೇಪರ್ ಮೇಲೆ ಜಾರುವುದು. ಬೇರೆ ಬಗೆಯ ಬಣ್ಣದ ಶಾಯಿಯಲ್ಲಿ ತಿದ್ದಬೇಕು.

**ಕರಡಚ್ಚು ಚಿಹ್ನೆಗಳು**

ಕರಡಚ್ಚು ತಿದ್ದುವುದರಲ್ಲಿ ಮಹತ್ತ್ವದ ಭಾಗ ಎಂದರೆ ಕರಡಚ್ಚು ಚಿಹ್ನೆಗಳ ಬಳಕೆಯ ರೀತಿ. ಪುಸ್ತಕ ಮುದ್ರಣ ಕಲೆ ವಿದೇಶಿಯರಿಂದ ನಮಗೆ ಬಳುವಳಿ ಬಂದ ಹಾಗೆಯೇ ಕರಡಚ್ಚು ತಿದ್ದುವ ಚಿಹ್ನೆಗಳೂ ವಿದೇಶಿಯರಿಂದ ಬಂದ ಕೊಡುಗೆ ಆಗಿದೆ.

ಕರಡಚ್ಚು ಚಿಹ್ನೆಗಳು ನೂರಾರೂ ಇವೆ. ಇಷ್ಟೇ ಎಂದು ಹೇಳಲಾಗದು. ಇವುಗಳನ್ನು ಮುಖ್ಯವಾಗಿ ಹಲವು ವಿಧಗಳಲ್ಲಿ ವರ್ಗೀಕರಿಸಬಹುದು.

೧. ಅಂಕಿಗಳ ಬಳಕೆ, ೨. ಸಂಕೇತ ಅಕ್ಷರ ಬಳಕೆ ೩. ಕರಡಚ್ಚು ಚಿಹ್ನೆಗಳು ೪. ಗ್ರಂಥ ಸಂಪಾದನೆ ಚಿಹ್ನೆಗಳು ೫. ವಿಜ್ಞಾನ ಗ್ರಂಥಗಳ ಚಿಹ್ನೆಗಳು ೬. ಶಾಸನಶಾಸ್ತ್ರದ ಚಿಹ್ನೆಗಳು ೭. ಲೇಖನ ಚಿಹ್ನೆಗಳು ಇತ್ಯಾದಿ.

೧. **ಅಂಕಿಗಳ ಬಳಕೆ:** ಕನ್ನಡದ ಗ್ರಂಥಗಳಲ್ಲಿ ಕನ್ನಡ ಅಂಕಿಗಳು, ರೋಮನ್ ಅಂಕಿಗಳು, ಅರಾಬಿಕ್ ಅಂಕಿಗಳು ಎಂದು ೩ ಬಗೆಯ ಅಂಕಿಗಳನ್ನು ಬಳಸುತ್ತಾರೆ. ಪೀಠಿಕಾ ಪುಟಗಳಲ್ಲಿ ಅನುಬಂಧಗಳಲ್ಲಿ ರೋಮನ್ ಸಣ್ಣ ದೊಡ್ಡ ಅಂಕಿಗಳನ್ನು ಬಳಸುತ್ತಾರೆ. ಪುಟಗಳ ಸಂಖ್ಯೆಗೆ ಕೆಲವರು ಇಂಗ್ಲಿಷ್ (ಅರಾಬಿಕ್) ಅಂಕಿಗಳನ್ನು ಕೆಲವರು ಕನ್ನಡ ಅಂಕಿಗಳನ್ನು ಬಳಸುತ್ತಾರೆ. ಈ ಮೂರು ಬಗೆಯ ಅಂಕಿಗಳನ್ನು ಬಳಸುವಲ್ಲಿ ಒಂದು ಕ್ರಮವಿರುವುದನ್ನು ಗಮನಿಸಬೇಕು.

೨. **ಗ್ರಂಥ ಸಂಪಾದನೆ ಚಿಹ್ನೆಗಳು:** ವಿಶೇಷವಾಗಿ ಹಳಗನ್ನಡ ಗ್ರಂಥಗಳನ್ನು, ಹಸ್ತಪ್ರತಿಗಳಿಂದ ಅಚ್ಚಿಗೆ ಸಿದ್ಧಪಡಿಸುವಾಗ ಗ್ರಂಥಸಂಪಾದನಾಶಾಸ್ತ್ರಾನುಸಾರವಾಗಿ ಹಲವು ಚಿಹ್ನೆಗಳನ್ನು ಬಳಸುತ್ತಾರೆ. ಇವುಗಳಲ್ಲಿ ಅಕ್ಷರ ಚಿಹ್ನೆಗಳೂ ಇವೆ, ವಿಶಿಷ್ಟ ಚಿಹ್ನೆಗಳೂ ಲೇಖನ ಚಿಹ್ನೆಗಳೂ ಇವೆ. ಇವುಗಳನ್ನು ಸಂಪಾದಕರು ಬಳಸಿದ ರೀತಿಯನ್ನು ಕರಡಚ್ಚುಗಾರರು ಗಮನಿಸಿ ತಿದ್ದಲು ಬಳಸಬೇಕು. ತೀನಂಶ್ರೀ ಅವರು ಸಂಪಾದಿಸಿದ ಗದಾಯುದ್ಧ ಸಂಗ್ರಹದಲ್ಲಿ ಮತ್ತು ಬಸವರಾಜದೇವ ರಗಳೆಯಲ್ಲಿ ಬಳಸಿರುವ ಗ್ರಂಥಸಂಪಾದನಾ ಚಿಹ್ನೆಗಳನ್ನು ಗಮನಿಸಿದರೆ ಕನ್ನಡಕ್ಕೆ ಅವರು ಕೊಟ್ಟ ಕೊಡುಗೆ ತಿಳಿಯುತ್ತದೆ.

೩. **ಲೇಖನ ಚಿಹ್ನೆಗಳು:** ಹೊಸಗನ್ನಡದ ವ್ಯಾಕರಣ ಗ್ರಂಥಗಳಲ್ಲಿ ಲೇಖನ ಚಿಹ್ನೆಗಳನ್ನು, ಅವುಗಳನ್ನು ಬಳಸುವ ರೀತಿಯನ್ನು ತಿಳಿಸಿರುತ್ತಾರೆ. ಕೆಲವು ನಿಘಂಟುಗಳಲ್ಲೂ ಇವುಗಳನ್ನು ವಿವರಿಸಲಾಗಿದೆ. ಇವುಗಳನ್ನು ಚೆನ್ನಾಗಿ ಅಧ್ಯಯನ ಮಾಡಬೇಕು. ಸಾಮಾನ್ಯವಾಗಿ ಲೇಖನ ಚಿಹ್ನೆಗಳನ್ನು ಒಂದೇ ರೀತಿ ಬಳಸಿದರೂ ಅವುಗಳನ್ನು ಒಂದೇ ಅರ್ಥದಲ್ಲಿ ಅನೇಕರು ಬಳಸುವುದಿಲ್ಲ. ಇದನ್ನು ಕರಡಚ್ಚುಗಾರರು ಗಮನಿಸಬೇಕು.

ಉದಾಹರಣೆಗೆ: ‘೦’ ಎಂಬ ಕುಂಡಲನ ಚಿಹ್ನೆಯನ್ನು ಅಕ್ಷರದ ಕೆಳಬಲಪಕ್ಕದಲ್ಲಿ ಕನ್ನಡನಿಘಂಟಿನಲ್ಲಿ ಒಂದು ಪದವನ್ನು ವಿಶೇಷ ಕಾರಣಗಳಿಗಾಗಿ ವಿವರಿಸಿಲ್ಲ ಎಂಬುದನ್ನು ಸೂಚಿಸಲು ಬಳಸಲಾಗಿದೆ.

ಅಂಕದುವರ = ಹೆಬ್ಬಾಗಿಲು ---- [ಅಂಕ, + ದುವರ, (< ದ್ವಾರ)
ಕಿಟೆಲ್ ಅವರು ಪದಗಳಲ್ಲಿ ಸಂಧಿ ಆದ ಪದಗಳಲ್ಲಿ ಸಂಧಿ ಆದ ಅಕ್ಷರದ ಮೇಲೆ ಇದನ್ನು ಬಳಸುತ್ತಾರೆ.

ಪಂಜರ ೦ ದೊಳಗೆ = ಪಂಜರದ + ಒಳಗೆ; ದ + ಒ ತೋರಿಸಲು ಕುಂಡಲನ ಚಿಹ್ನೆ ೦ ಬಳಸಿದೆ. (ಕನ್ನಡ ಕಾವ್ಯಮಾಲೆ ಕಿಟೆಲ್ ಪುಟ ೩)

ತೀನಂಶ್ರೀ ಅವರು ಗದಾಯುದ್ಧ ಸಂಗ್ರಹದಲ್ಲಿ ಕಾವ್ಯದಲ್ಲಿ ಸಮಾಸಪದದ ಒಂದು ಭಾಗವನ್ನು, ಟಿಪ್ಪಣಿಯಲ್ಲಿ ತೋರಿಸಿ ಅರ್ಥ ಬರೆದಿದೆ ಎಂಬುದಕ್ಕೆ ಈ ಕುಂಡಲನ ಚಿಹ್ನೆ ೦ ಬಳಸಿದ್ದಾರೆ.

ಉದಾ: ನಿಜಭುಜಪ್ರತಾಪನಿರ್ಜಿತ '೦' ನಿಖಿಲ ಭೀಮಸೇನಾ..... ಇಲ್ಲಿ ನಿರ್ಜಿತ ಪದಕ್ಕೆ ಟಿಪ್ಪಣಿಯಲ್ಲಿ ಅರ್ಥ ಕೊಟ್ಟಿದೆ ಎಂಬುದು ಈ ಚಿಹ್ನೆಯ ಅರ್ಥವಾಗಿದೆ.

ಕುವೆಂಪು ಅವರು •– ಚಿಹ್ನೆಯನ್ನು ವಿಶಿಷ್ಟಾರ್ಥದಲ್ಲಿ ಬಳಸಿದ್ದಾರೆ. ಎಂ.ಎಸ್. ಪುಟ್ಟಣ್ಣ ಅವರು ಹೇಮಚಂದ್ರ ರಾಜವಿಲಾಸ (ಕಿಂಗ್‌ಲಿಯರ್) ನಾಟಕದಲ್ಲಿ (೧೮೯೯) ಸಂಭಾಷಣೆಗಳ ವ್ಯಕ್ತಿಗಳ ಹೆಸರಿನ ಮುಂದೆ ಬಳಸಿದ್ದಾರೆ. ದೊರೆ •– ಇಂದುಕಲೆ •– ಇತ್ಯಾದಿ.

ಲೇಖನ ಚಿಹ್ನೆಗಳಲ್ಲಿ ಸಾಮಾನ್ಯವಾಗಿ ಒಂದು ಸಲಕ್ಕೆ ಒಂದು ಚಿಹ್ನೆ ಬಳಕೆ ಆಗುತ್ತದೆ. ಆದರೆ ಕೆಲವೊಮ್ಮೆ ಎರಡೆರಡು ಚಿಹ್ನೆಗಳನ್ನು ಒಟ್ಟಿಗೆ ಬಳಸುತ್ತಾರೆ. ಶಿ.ಶಿ. ಬಸವನಾಳರು ಬಸವಣ್ಣನವರ ವಚನಗಳಲ್ಲಿ ವಿನ್ಯಾಸದಲ್ಲಿ ! ! ! ಎಂದು ಆಶ್ಚರ್ಯಚಿಹ್ನೆ ಬಳಸಿದ್ದಾರೆ. ಗಣಿತದ ಚಿಹ್ನೆಗಳನ್ನು ಬೇರೆ ಅರ್ಥದಲ್ಲಿ ಬಳಸಲಾಗುತ್ತದೆ. = ಸಮ + ಅಧಿಕ – ಋಣ

wf ತಪ್ಪು ಫಾಂಟ್ = wrong font

X ಮುರಿದ ಫಾಂಟ್ = broken font

rom ರೋಮನ್ ಟೈಪುಗಳು= roman types

ital ಇಟಾಲಿಕ್‌ಗಳು, ಓರೆ ಅಕ್ಷರಗಳು - italics

Cap ಕ್ಯಾಪಿಟಲ್‌ಗಳು - capitals

Sc ಚಿಕ್ಕ ಗಾತ್ರದ ಕ್ಯಾಪಿಟಲ್ ಅಕ್ಷರಗಳು - small capitals

lc ಲೋವರ್ ಕೇಸ್ - lower case

Cap ಲೋವರ್ ಕೇಸಿನ ಅಕ್ಷರ, ಇಂಗ್ಲಿಶ್‌ನ ಚಿಕ್ಕ ಅಕ್ಷರ - lower case le

✓ ತಿದ್ದುವುದಕ್ಕಿಂತ ಮೊದಲಿದ್ದದ್ದನ್ನು ಉಳಿಸಿಕೊಳ್ಳಿ - retain the origi

No ¶ ಪ್ಯಾರಾ ಬೇಡ - no paragraph

⊏ ಒತ್ತಕ್ಷರ ಸೇರಿಸಿ

ಚಿಹ್ನೆಗಳನ್ನು ಪದದ ಅರ್ಥಕ್ಕೆ ಗಿರಿ=ಬೆಟ್ಟ, ಸಂಧಿ ಸೂಚಿಸಲು ಅರುಣ + ಉದಯ = ಅರುಣೋದಯ ಮನೆ-ಮಾರು ಇತ್ಯಾದಿ.

೪. **ಕರಡಚ್ಚು ಚಿಹ್ನೆಗಳು:** ಕರಡಚ್ಚು ತಿದ್ದುವಲ್ಲಿ ಮಾತ್ರ ಬಳಸುವ ಚಿಹ್ನೆಗಳನ್ನು ಕರಡಚ್ಚು ಚಿಹ್ನೆಗಳು ಎಂದು ಕರೆಯುತ್ತೇವೆ. ಉದಾ: ⁀ ಸೇರಿಸು # ಬಿಡಿಸು ⊔ ಕೆಳಕ್ಕೆ ಇಳಿಸಿ ⊓ ಎತ್ತರಿಸಿ ಇತ್ಯಾದಿ.

೫. **ಅಕ್ಷರ ಚಿಹ್ನೆಗಳು:** Wf ತಪ್ಪುಮೊಳೆ, Sp ಕಾಗುಣಿತ ಪರಿಶೀಲಿಸಿ, rom ರೋಮನ್ ಟೈಪು ಬಳಸಿ ಇತ್ಯಾದಿ. ಅಕ್ಷರ ಚಿಹ್ನೆಗಳಲ್ಲಿ ಇಂಗ್ಲಿಷ್ ಅಕ್ಷರಗಳನ್ನು ಬಳಸುತ್ತಿದ್ದಾರೆ. ಕನ್ನಡ ಬಳಸುತ್ತಿಲ್ಲ, ಏಕೆ ಬಳಸಬಾರದು?

೬. **ಸಂಕ್ಷಿಪ್ತಾಕ್ಷರಗಳು:** ಗ್ರಂಥಗಳ ಹೆಸರುಗಳನ್ನು ಲೇಖಕರ / ಸಂಸ್ಥೆಗಳ ಹೆಸರುಗಳನ್ನು ಸಂಕ್ಷಿಪ್ತಗೊಳಿಸುವ ಪರಿಪಾಟವನ್ನು ಮುದ್ರಣದಲ್ಲಿ ಕಾಣುತ್ತೇವೆ.
ಉದಾ: ಅನಕೃ, ತರಾಸು, ಪುತಿನ, (ಲೇಖಕರು) ಕಸಾಪ, ಮೈವಿವಿ (ಸಂಸ್ಥೆ)

ಪಂಭಾ (ಪಂಪಭಾರತ), ಆದಿಪು (ಆದಿಪುರಾಣ) ಗ್ರಂಥಗಳು ಇತ್ಯಾದಿ ಪುನರುಕ್ತಿ ಆಗದಿರಲು ಸಾಮಾನ್ಯವಾಗಿ ಮೂರಕ್ಷರಗಳಲ್ಲಿ ಸಂಕ್ಷಿಪ್ತಾಕ್ಷರ ಸಂಕೇತ ರಚಿಸುವ ನಿಯಮವನ್ನು ಕನ್ನಡ ನಿಘಂಟಿನಲ್ಲಿ ಅನುಸರಿಸಿದೆ. ಇದು ಉಳಿದವರಿಗೆ ಮಾದರಿ ಆಗಿದೆ. ಪಂಪಭಾ, ಆದಿಪು, ಯಶೋಚ ಇತ್ಯಾದಿ ಅನೇಕ ಸಂಕೇತ ಅಕ್ಷರಗಳು ಬಂದಾಗ ಪುನರುಕ್ತಿ ಆಗದಿರಲು ಮೂರಕ್ಷರ ಪದ್ಧತಿ ಒಳ್ಳೆಯದು.

೭. **ಅಕ್ಷರ ಸಂಕೇತಗಳು:** ಅಕ್ಷರ ಸಂಕೇತಗಳು ಎಂದರೆ ಯಾವುದೋ ಒಂದು ವಿವರವನ್ನು ಸಂಕೇತಿಸುವ ಅಕ್ಷರಗಳಿಗೆ ಅಕ್ಷರ ಸಂಕೇತಗಳು ಎನ್ನುತ್ತೇವೆ. ಗ್ರಂಥ ಸಂಪಾದನೆಯಲ್ಲಿ ವಿಶೇಷವಾಗಿ ಇವನ್ನು ಬಳಸುತ್ತೇವೆ.
ಉದಾಹರಣೆ: 'ಕ' ಪ್ರತಿ = ಮೈಸೂರು ಓರಿಯಂಟಲ್ ಪ್ರತಿ
'ಚ' ಪ್ರತಿ = ತಿಮ್ಮಣ್ಣದಾಸರ ಪ್ರತಿ, ಇತ್ಯಾದಿ

ಕನ್ನಡ ಅಕ್ಷರಗಳ ಬದಲಾಗಿ ಇಂಗ್ಲಿಷ್ ಅಕ್ಷರಗಳನ್ನು ಬಳಸುವುದುಂಟು. ಕಿಟೆಲ್ ಶಬ್ದಮಣಿದರ್ಪಣಕ್ಕೆ ಆಕರವಾದ ಹಸ್ತಪ್ರತಿಗಳಿಗೆ ಇಂಗ್ಲಿಷ್ ಸಂಕೇತ ಬಳಸಿದ್ದಾರೆ.

೮. **ಅಡಿಟಿಪ್ಪಣಿ ಚಿಹ್ನೆಗಳು:** ಮೇಲೆ ಪಠ್ಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿಷಯಗಳನ್ನು ಅಥವಾ ಉಲ್ಲೇಖಗಳ ಆಕರಸೂಚಿಸಲು ಸಂಖ್ಯೆಗಳನ್ನು ಸಂಶೋಧನ ಪ್ರಬಂಧಗಳಲ್ಲಿ ಈಗ ಬಳಸುತ್ತಾರೆ. ಆದರೆ ಹಳೆಯ ಲೇಖಕರು ಗ್ರಂಥ ಸಂಪಾದಕರು ಮ. ರಾಮಾನುಜ ಅಯ್ಯಂಗಾರ್, ಅಳಸಿಂಗಾಚಾರ್ಯ ಮೊದಲಾದವರು ಕೆಲವು ಚಿಹ್ನೆಗಳನ್ನು ಅಡಿಟಿಪ್ಪಣಿಗಳಿಗೆ ಬಳಸುತ್ತಿದ್ದರು. ಇದು ಹಿಂದಿನಕಾಲದ ವಿದ್ವಾಂಸರೆಲ್ಲರ ಪದ್ಧತಿ ಆಗಿತ್ತು ಎನ್ನಬಹುದು ‡ + * § ಮೊದಲಾದ ಚಿಹ್ನೆಗಳನ್ನು ಬಳಸಿರುವುದನ್ನು ಕಾಣಬಹುದು. ಕರಡಚ್ಚುಗಳಲ್ಲಿ ಬಳಸುವ ಚಿಹ್ನೆಗಳು ಅಕ್ಷರಗಳ ಬಗ್ಗೆ ಚಿಹ್ನೆ / ಅಕ್ಷರ, ಅದರ ಹೆಸರು, ಬಳಸುವ ಸಂದರ್ಭ ಇತ್ಯಾದಿಗಳ ಸಮಗ್ರ ಪಟ್ಟಿ ಕನ್ನಡದಲ್ಲಿ ಯಾರೂ ಸಿದ್ಧಪಡಿಸಿಲ್ಲ.

೯. **ಶಾಸ್ತ್ರಗಳ ಚಿಹ್ನೆಗಳು:** ಸಂಗೀತದಲ್ಲಿ ಪ್ರಸ್ತಾರದ ಚಿಹ್ನೆಗಳು, ಗಣಿತ ಭೌತಶಾಸ್ತ್ರ ಚಿಹ್ನೆಗಳು ಪ್ರತ್ಯೇಕವಾಗಿದೆ.

ಕರಡಚ್ಚು ತಿದ್ದುಗಾರನಿಗೆ ಈ ಎಲ್ಲ ಬಗೆಯ ಚಿಹ್ನೆಗಳು ಸಂಕೇತಾಕ್ಷರಗಳು ಅಂಕಿಗಳು ಇತ್ಯಾದಿ, ಪೂರ್ಣಪರಿಚಯ ಬಳಕೆ ವಿಧಾನಗಳು ತಿಳಿದಿರಬೇಕು. ಆದ್ದರಿಂದ ಕರಡಚ್ಚು ತಿದ್ದುವವನು ವಿಷಯತಜ್ಞ ಆಗಿರಬೇಕು. ವ್ಯಾಕರಣ,

ಭಾಷಾವೈಖರಿ ತಿಳಿದಿರಬೇಕು. ಹಸ್ತಪ್ರತಿ ಓದುವ ಅಭ್ಯಾಸ, ವಿವಿಧ ಲಿಪಿಗಳ ಪರಿಚಯ ತಿಳಿದಿರಬೇಕು. ಶ್ರದ್ಧೆ ಆಸಕ್ತಿಗಳಿಂದ ಕಲಿಯುವ ಮನೋಭಾವ ಇರಬೇಕು. ಕರಡಚ್ಚುಗಾರ ಮುದ್ರಣ ಪ್ರಪಂಚದಲ್ಲಿ ಗ್ರಂಥಶುದ್ಧಿಗೆ ಅನಿವಾರ್ಯವಾದ ಮಹತ್ವದ ವ್ಯಕ್ತಿ. ಅವನಿಗೆ ತಕ್ಕ ಸ್ಥಾನಮಾನ, ಸಂಭಾವನೆಯನ್ನು ಕೊಡುವುದು ಪ್ರಕಾಶಕರ ಮುದ್ರಕರ ಆದ್ಯಕರ್ತವ್ಯ. ಕನ್ನಡ ಪುಸ್ತಕ ಪ್ರಾಧಿಕಾರದಂತಹ ಸಂಸ್ಥೆಗಳು ನಮ್ಮ ನಾಡಿನಾದ್ಯಂತ ಕನಿಷ್ಠಪಕ್ಷ ೩ ದಿನಗಳಿಗೆ ಕಡಿಮೆಯಿಲ್ಲದೆ ಸಾಧ್ಯವಾದರೆ ಒಂದು ವಾರ ಕರಡಚ್ಚು ತಿದ್ದುವ ಕಮ್ಮಟಗಳನ್ನು ಏರ್ಪಡಿಸಿದರೆ ಒಳ್ಳೆಯದು. ಪತ್ರಿಕೆಯಲ್ಲಿ ಕರಡು ತಿದ್ದುವವರಿಗೆ, ಆಹ್ವಾನಪತ್ರಿಕೆ, ವಿಜ್ಞಾನಗ್ರಂಥಗಳನ್ನು, ಶಾಸ್ತ್ರಗ್ರಂಥ, ಗ್ರಂಥಸಂಪಾದನೆ, ಗ್ರಂಥಗಳನ್ನು ಸಣ್ಣಪುಟ್ಟ ಬಿಡಿ ಪ್ರಕಟಣೆಗಳನ್ನು ತಿದ್ದುವ ಹವ್ಯಾಸಿ ಹಾಗೂ ವೃತ್ತಿ ಕರಡನ್ನು ತಿದ್ದುವವರಿಗೆ ಪ್ರತ್ಯೇಕ ಕಮ್ಮಟಗಳನ್ನು ಏರ್ಪಡಿಸುವ ಅಗತ್ಯವಿದೆ. ಹಾಗೂ ಡಿಟಿಪಿ ಮಾಡುವವರಿಗೆ, ಆಧುನಿಕ ವಿದ್ಯುನ್ಮಾನ ಯಂತ್ರಗಳನ್ನು ಬಳಸುವವರಿಗೆ ಕರಡು ತಿದ್ದುವ ವಿಧಾನ ಪರಿಚಯ ಅಗತ್ಯವಿದೆ. ಹೀಗಾದರೆ ತಪ್ಪಿಲ್ಲದ ಗ್ರಂಥಗಳು ಕನ್ನಡದಲ್ಲಿ ಹೆಚ್ಚಾಗಿ ಬರಲು ಶಕ್ಯವಿದೆ. ಆ ಕಾಲ ಬರಲಿ ಎಂದು ಹಾರೈಸುವೆ.

ಬಿಟ್ಟುಬಿಡಿ ಮತ್ತು ಹತ್ತಿರ ತ
ತಿರುವುಮುರುವು ಮಾಡಿ - re
ಹತ್ತಿರ ತನ್ನಿ - closeup
# ದೂರವಿರಲಿ - insert spac
ಪ್ಯಾರಾ - para
ಒಂದು ಎಮ್ ಇಂಡೆಂಟ್ -
ಎಡಗಡೆಗೆ ಹೋಗಬೇಕು -
ಬಲಗಡೆಗೆ ಹೋಗಬೇಕು - r
ಕೆಳಕ್ಕೆ ಇಳಿಸಬೇಕು - lower
ಎತ್ತರಿಸಬೇಕು - elevate
ಮಾರ್ಜಿನಿನಲ್ಲಿ ಸೂಚಿಸಿರುವ
eq # ಸಮಾನವಾದ ಸ್ಥಳ ಬಿಡಬೇಕ
X ಮುರಿದ ಅಕ್ಷರ - broken
↓ ಕೊಟ್ಟಿರುವ ಸ್ಪೇಸನ್ನು ಕೆಳಕ್ಕೆ
= ಸಾಲುಗಳನ್ನು ನೆಟ್ಟಗೆ ಮಾಡಿ
|| ಟೈಪುಗಳನ್ನು ಹೊಂದಿಸಿ - al

ಅರ್ಧವಿರಾಮ ಸೇರಿಸಿ - in
ಅಪಾಸ್ಟ್ರಫಿ ಸೇರಿಸಿ - inser
|=| ಹೈಫನ್ ಸೇರಿಸಿ - insert
:| ಕೋಲನ್ ಸೇರಿಸಿ - insert
;| ಸೆಮಿ ಕೋಲನ್ ಸೇರಿಸಿ - in
ಪೂರ್ಣವಿರಾಮ ಸೇರಿಸಿ - i
? ಪ್ರಶ್ನೆ ಚಿಹ್ನೆ ಸೇರಿಸಿ - inser
(?) ಲೇಖಕರಿಗೆ ಪ್ರಶ್ನೆ - query
add ಲಿಗೇಚರ್ ಬಳಸಿ - use lig
(sp) ಕಾಗುಣಿತ ಪರಿಶೀಲಿಸಿ - ch

# ಪಠ್ಯದ ಹಾದಿಯ ಕೈಮರಗಳು



ಎಸ್. ದಿವಾಕರ್

ಕಳೆದ ಶತಮಾನದ ಎರಡನೆಯ ಅಥವಾ ಮೂರನೆಯ ದಶಕದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ 'ಪರಿಷತ್ಪತ್ರಿಕೆ'ಗೆ ಒಂದು ಸಂಶೋಧನಾ ಲೇಖನವನ್ನು ಕಳುಹಿಸಿದ ರಾಷ್ಟ್ರಕವಿ ಗೋವಿಂದ ಪೈ ಅವರು ಆ ಲೇಖನದ ಕರಡನ್ನು ತಿದ್ದುವುದಕ್ಕಾಗಿ–ಮುಖ್ಯವಾಗಿ ಅಕ್ಷರಸ್ಖಾಲಿತ್ಯವನ್ನು ಹಾಗೂ ಅನರ್ಥಕ ವಿರಾಮ ಚಿಹ್ನೆಗಳನ್ನು ಸರಿಪಡಿಸುವುದಕ್ಕಾಗಿ–ಮಂಜೇಶ್ವರದಿಂದ ಬೆಂಗಳೂರಿಗೆ ಬಂದುಹೋದರಂತೆ. ಬಹುಶಃ ಜಿ.ಪಿ. ರಾಜರತ್ನಂ ಅವರು ಒಂದೆಡೆ ಉಲ್ಲೇಖಿಸಿರಬಹುದಾದ ಈ ಪ್ರಸಂಗ ಬರವಣಿಗೆಯ ಖಚಿತತೆಯ ಬಗೆಗೆ ಪೈ ಅವರಿಗಿದ್ದ ಅದಮ್ಯ ನಿಷ್ಠೆಯನ್ನು ಸೂಚಿಸುತ್ತದೆ. ಕೆಲವಾದರೂ ತಪ್ಪುಗಳಿಲ್ಲದ ಒಂದೇ ಒಂದು ಪತ್ರಿಕೆಯಾಗಲೀ ಪುಸ್ತಕವಾಗಲೀ ತೀರಾ ಅಪರೂಪವಾಗಿರುವ ಕಾಲದಲ್ಲಿ ಪೈ ಅವರ ಈ ಹುಚ್ಚಿಗೆ ಆಶ್ಚರ್ಯಾರ್ಥಕ ಚಿಹ್ನೆ ಹಾಕಬೇಕೇನೊ.

ಪತ್ರಿಕೆಗಳ ವಿಷಯಕ್ಕೆ ಬಂದಾಗ ನಮ್ಮ ಪತ್ರಕರ್ತರು ತಪ್ಪುಗಳನ್ನು ತಿದ್ದುವುದು ಹಾಗಿರಲಿ, ವಿರಾಮ ಚಿಹ್ನೆಗಳನ್ನೇ ಎಗರಿಸಿ ಬಿಡುವುದನ್ನು ಕಾಣುತ್ತೇವೆ. ಲೇಖಕರಿಗೆ ವಿರಾಮ ಚಿಹ್ನೆಗಳು ಪ್ರಿಯವಾದರೂ ಅನಗತ್ಯ ಜಾಗಗಳಲ್ಲಿ ಕೂಡ ಅವುಗಳನ್ನು ಅಪರಾಧಿಗಳಂತೆ ಅವರು ನಿಲ್ಲಿಸುವುದುಂಟು. ಇಷ್ಟಕ್ಕೂ ವಿರಾಮ ಚಿಹ್ನೆಗಳ ಅಗತ್ಯವಾದರೂ ಏನು? ನೂರಾರು ಮೈಲಿ ದೂರವನ್ನು ಕ್ರಮಿಸುವ ಒಬ್ಬ ಪ್ರಯಾಣಿಕ ದಾರಿಯುದ್ದಕ್ಕೂ ಹಳ್ಳ–ಕೊಳ್ಳ, ಬೆಟ್ಟ–ಕಾಡು, ಊರು–ಪಟ್ಟಣಗಳನ್ನು ಕಂಡಾಗಲೆಲ್ಲ ಅವುಗಳಲ್ಲಿ ಒಂದೊಂದನ್ನೂ ತನ್ನದೇ ಅನುಭವದ ಬೆಳಕಿನಲ್ಲಿ ನೋಡುತ್ತ, ಅಲ್ಲಲ್ಲಿ ಸುಧಾರಿಸಿಕೊಳ್ಳುತ್ತ, ಸಂಗತಿ–ಸಂದರ್ಭಗಳಿಗೆ ತಕ್ಕಂತೆ ಸಂತೋಷಪಡುತ್ತ, ನಿಡುಸುಯ್ಯುತ್ತ, ಅಚ್ಚರಿಯನ್ನು ತಾಳುತ್ತ, ಮುಂದುವರಿಯುತ್ತಾನಷ್ಟೆ. ಲೇಖಕನಾದವನು ಕೂಡ ಆ ಪ್ರಯಾಣಿಕನಂತೆಯೇ ಅಲ್ಲವೆ? ಶಬ್ದಗಳಲ್ಲಿ, ವಾಕ್ಯಗಳಲ್ಲಿ, ಪ್ಯಾರಾಗಳಲ್ಲಿ, ಇಡೀಇಡೀ ಪುಟಗಳಲ್ಲಿ ಅವನು ಪಡಿಮೂಡಿಸುವ ಅನುಭವಲೋಕದ ವೈವಿಧ್ಯ ಓದುಗನಿಗೂ ದಕ್ಕಬೇಕಾದರೆ ಲೇಖಕನ ಪಠ್ಯದಲ್ಲಿ ಕೈಮರಗಳ ಹಾಗೆ ವರ್ತಿಸುವ ಸೂಕ್ತ ವಿರಾಮ ಚಿಹ್ನೆಗಳಿರಬೇಕು.

ವಿಜ್ಞಾನಿ ಲೀವಿನ್ ಥಾಮಸ್ ಬರೆದಿರುವ 'ನೋಟ್ಸ್ ಆನ್ ಪಂಕ್ಚುಯೇಷನ್' ಎಂಬ ಪ್ರಬಂಧ ಮೊಟ್ಟಮೊದಲ ಬಾರಿಗೆ ವಿರಾಮ ಚಿಹ್ನೆಗಳ ಬಗೆಗೆ ನಾನು ಯೋಚಿಸುವಂತೆ ಮಾಡಿದ್ದು ನಿಜ. ವಿರಾಮ ಚಿಹ್ನೆ ಬಳಕೆಗೆ ನಿರ್ದಿಷ್ಟ ನಿಯಮಗಳೇನೂ ಇದ್ದಂತಿಲ್ಲ. ಇಂಗ್ಲೆಂಡಿನ ವೈಯಾಕರಣಿ ಫೌಲರ್‌ನ ಪ್ರಕಾರ ಇಂಗ್ಲಿಷ್‌ನಲ್ಲಿ ಇರುವುದು ನಾಲ್ಕೇ ವಿರಾಮ ಚಿಹ್ನೆಗಳು– ಅಲ್ಪವಿರಾಮ, ಸೆಮಿಕೋಲನ್, ಕೋಲನ್ ಮತ್ತು ಪೂರ್ಣ ವಿರಾಮ. ಪ್ರಶ್ನಾರ್ಥಕ ಹಾಗೂ ಆಶ್ಚರ್ಯಾರ್ಥಕ ಚಿಹ್ನೆಗಳು ವಿರಾಮ ಚಿಹ್ನೆಗಳು ಅಲ್ಲ–ಹೆಚ್ಚೆಂದರೆ ಅವೂ ಧ್ವನಿಸೂಚಕ ಚಿಹ್ನೆಗಳು (ಇದು ಅವನ ಕಾಲದಲ್ಲಿದ್ದ ಪರಿಸ್ಥಿತಿ ಎಂಬ ನೆನಪಿರಲಿ). ಗ್ರೀಕರು ಸೆಮಿಕೋಲನ್ ಚಿಹ್ನೆಯನ್ನು ಪ್ರಶ್ನಾರ್ಥಕ ಚಿಹ್ನೆಯಾಗಿ ಬಳಸುತ್ತಿದ್ದರು. 'ಎಲ್ಲಿಗಪ್ಪಾ ಹೋಗಿದ್ದೆ;' ಎಂದು ನಾವೂ ಗ್ರೀಕರಂತೆ ಬರೆದರೆ ಅದು ಪ್ರಶ್ನೆಯಾಗಿ ಕಾಣಿಸೀತೆ?

ನನ್ನ ದೃಷ್ಟಿಯಲ್ಲಿ ಅಲ್ಪವಿರಾಮ ಅಥವಾ ಕಾಮ (ಲೈಂಗಿಕತೆಗೆ ಸಂಬಂಧಿಸಿದ್ದಲ್ಲ) ಲೇಖಕರಿಗೆಲ್ಲ ತೀರ ಉಪಯುಕ್ತವೆನಿಸಿದ ಚಿಹ್ನೆ. ಟಿ.ಜಿ. ರಾಘವರ 'ಜ್ವಾಲೆ ಆರಿತು' ಕಥಾ ಸಂಕಲನಕ್ಕೆ ಮುನ್ನುಡಿ ಬರೆಯುತ್ತ ವೈಯೆನ್ಕೆ ಅಲ್ಲಿನ ಕೆಲವು ಕತೆಗಳಿಗೆ ಸಂಬಂಧಿಸಿದಂತೆ 'ಕಾಮ ಕಾಮ.... ಸ್ವಲ್ಪವಾದರೂ ಬೇಡವೆ ಅಲ್ಪವಿರಾಮ?' ಎಂದು ಅವರಿಗಷ್ಟೇ ಸಹಜವಾದ 'ಪನ್' ಮಾಡಿದ್ದರು. ಲೇಖಕರು ಬರೆಯುತ್ತಿರುವಾಗಲೇ ತಮಗೆ ಅವಶ್ಯಕವೆನ್ನಿಸಿದ ಕಡೆ ಕಾಮಾಗಳನ್ನು ಹಾಕುವುದೊಳ್ಳೆಯದು. ಬರೆದಮೇಲೆ ಹಾಕತೊಡಗಿದರೆ ಯಾವಯಾವ ಜಾಗ ಬೋಳುಬೋಳಾಗಿದೆಯೋ ಅಲ್ಲೆಲ್ಲ ಕಾಮಗಳು ತುಂಬಿ ಹೋಗಿ, ಲೇಖಕರಿಗೆ ಅರ್ಥಪೂರ್ಣವೆನ್ನಿಸಿದರೂ ಓದುಗರಿಗೆ ಹೆಜ್ಜೆಗೊಂದು ಮುಳ್ಳಿನಂತೆ ಚುಚ್ಚುತ್ತವೆ. ಸಿನಿಮಾದಲ್ಲಿ ಒಂದು ದೃಶ್ಯ ಮರೆಯಾಗಿ ಇನ್ನೊಂದು ದೃಶ್ಯ ಪ್ರಾರಂಭವಾಗುವ ಕ್ಷಣಾರ್ಧವಿದೆಯಲ್ಲ, ಅದೇ ಒಂದು ರೀತಿಯ ಕಾಮ.

ಸೆಮಿಕೋಲನ್ ಇಡೀ ವಾಕ್ಯವೊಂದನ್ನು ಓದುವ ಮುಂಚೆಯೇ ಇನ್ನೂ ಮುಗಿದಿಲ್ಲ ಎಂದು ಸೂಚಿಸುವ ಚಿಹ್ನೆ; ಲೇಖಕನ ಉದ್ದೇಶಕ್ಕೆ ಇನ್ನೇನೋ ಸೇರಬೇಕೆಂಬ ಇಂಗಿತವನ್ನು ಧ್ವನಿಸುವ ಸಂಕೇತ. ಹಾಗೆ ನೋಡಿದರೆ ಸೆಮಿಕೋಲನ್ ಯಾವುದೆಂದು ತಿಳಿಯದ 'ದಿವ್ಯ'ಕ್ಕೆ ಕೈಚಾಚುವಂಥದ್ದು. ಅದು ಕಣ್ಣಿಗೆ ಬಿದ್ದರೆ ಸಾಕು, ನಮ್ಮಲ್ಲಿ ನಿರೀಕ್ಷೆಯನ್ನು ಕೆರಳಿಸುತ್ತದೆ; ಇನ್ನೂ ಏನೋ ಇದೆ, ಓದುತ್ತಾ ಹೋದರೆ ತಿಳಿಯುತ್ತದೆ ಎಂಬ ಭಾವನೆಯನ್ನು ಮೂಡಿಸುತ್ತದೆ. ಸಿನಿಮಾದಲ್ಲಿ ಮಧ್ಯಂತರ ಇದ್ದಹಾಗೆ.

ಕೋಲನ್ ನನ್ನ ಮಟ್ಟಿಗೆ ಆಕರ್ಷಕವೇ ಅಲ್ಲ. ವಾಕ್ಯವೊಂದರಲ್ಲಿ ಅದು ತಟ್ಟನೆ ಕಾಣಿಸಿಕೊಂಡರೆ ಅದನ್ನು ಬರೆದ ಲೇಖಕ 'ಈ ದಿಕ್ಕಿನಲ್ಲಿ ನೋಡು' ಎಂದು ಆಜ್ಞೆಯಿತ್ತಂತೆ. ನಮಗೆ ಇಷ್ಟವಿರಲಿ, ಇಲ್ಲದಿರಲಿ ಲೇಖನ ಆ ಆಜ್ಞೆಯನ್ನು ಪಾಲಿಸುವುದೇ ನಮ್ಮ ಕರ್ಮ, ಈ ಚಿಹ್ನೆ ಒಂದರಿಂದ ಇನ್ನೊಂದು, ಇನ್ನೊಂದರಿಂದ ಮತ್ತೊಂದು, ಮತ್ತೊಂದರಿಂದ ಮಗದೊಂದು ಎಂದು ನಮ್ಮನ್ನು ವಿಷಯದಿಂದ ವಿಷಯಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ವಿಚಾರದಿಂದ ವಿಚಾರಕ್ಕೆ ಕುಪ್ಪಳಿಸುವಂತೆ ಮಾಡುತ್ತದೆ– ಕಪ್ಪೆ ಸ್ವಲ್ಪ ದೂರ ಹೋಗಬೇಕಾದರೂ ಹತ್ತಾರು ಬಾರಿ ಕುಪ್ಪಳಿಸುವುದಿಲ್ಲವೆ, ಹಾಗೆ. ನಮ್ಮ ಪ್ರಸಿದ್ಧ ಲೇಖಕ ಯಶವಂತ ಚಿತ್ತಾಲರು ತಮ್ಮ ಕೆಲವು ಕತೆಗಳಲ್ಲಿ ವಾಕ್ಯ ಒಂದಾದರೂ ಅದನ್ನು ಎರಡು ಮೂರು ಕೋಲನ್‌ಗಳಿಂದ ತುಂಬಿರುವುದುಂಟು.

ಆಶ್ಚರ್ಯಾರ್ಥಕ ಚಿಹ್ನೆ, ಲೀವಿನ್ ಥಾಮಸ್ ಹೇಳುವ ಹಾಗೆ ತುಂಬ ಕಿರಿಕಿರಿ ಉಂಟುಮಾಡುವ ಅಡಚಣೆ. 'ಆಹಾ! ಎಷ್ಟು ಚೆನ್ನಾಗಿದೆ!' ಎಂಬ ಉದ್ಗಾರಕ್ಕೆ, ಯಾವುದೋ ಸಿನಿಮಾ 'ಬರಲಿದೆ! ಬರಲಿದೆ!' ಎನ್ನುವುದಕ್ಕೆ, 'ವಿಜೃಂಭಿಸಿತು ರಾಮಬಾಣ!' ಎಂದು ವ್ಯಂಗ್ಯವಾಡುವುದಕ್ಕೆ ಆಶ್ಚರ್ಯಪಡಬೇಕೆ? ಪ್ರಗತಿಶೀಲರ ಕಾಲದ ಹಲವಾರು ಕಾದಂಬರಿಗಳಲ್ಲಿ ಪುಟಕ್ಕೆ ಮೂರು ನಾಲ್ಕರಂತೆ ಆಶ್ಚರ್ಯಾರ್ಥಕ ಚಿಹ್ನೆಗಳಿದ್ದುದನ್ನು ನಾನು ಮರೆತಿಲ್ಲ.

ಸಿ.ಕೆ. ವೆಂಕಟರಾಮಯ್ಯನವರ 'ನಚಿಕೇತ' ನಾಟಕ ನಡೆಯುತ್ತಿದ್ದಾಗ ಅದರ ತೀರ ದುಃಖಕರ ಸನ್ನಿವೇಶವೊಂದರಲ್ಲಿ ಪ್ರೇಕ್ಷಕರೆಲ್ಲ ನಗುತ್ತಿದ್ದರಂತೆ. ಅದನ್ನು ಸಹಿಸಲಾಗದ ವೆಂಕಟರಾಮಯ್ಯನವರು ಸ್ವತಃ ವೇದಿಕೆಯನ್ನು ಹತ್ತಿ 'ಮಹಾಶಯರಲ್ಲಿ ಒಂದು ವಿನಂತಿ. ಇದು ತೀರಾ ದುಃಖದಾಯಕವಾದ ಪ್ರಸಂಗ. ಆದ್ದರಿಂದ ಪ್ರೇಕ್ಷಕರು ನಗಬಾರದಾಗಿ ಪ್ರಾರ್ಥನೆ' ಎಂದು ಬೇಡಿಕೊಂಡರಂತೆ. ಆಶ್ಚರ್ಯಾರ್ಥಕ ಚಿಹ್ನೆ ಎಷ್ಟೋ ಸಂದರ್ಭಗಳಲ್ಲಿ ಕೆಲಸ ಮಾಡುವುದು ಹೀಗೆಯೇ. ಬಹುಮುಖ್ಯವಾದುದನ್ನೋ ಅದ್ವಿತೀಯವಾದದ್ದನ್ನೋ ವಾಕ್ಯವೊಂದರಲ್ಲಿ ಹಿಡಿದಿಡಬಹುದಾದರೆ ಅದೇನೆಂದು ಸೂಚಿಸುವ ಚಿಹ್ನೆಯಾದರೂ ಯಾಕೆ? ಮತ್ತೆ ಒಂದು ವಾಕ್ಯ ನೀರಸವಾಗಿದ್ದರೆ ಆಶ್ಚರ್ಯಾರ್ಥಕ ಚಿಹ್ನೆ ಆ ನೀರಸವನ್ನು ಇಮ್ಮಡಿಗೊಳಿಸುತ್ತದಷ್ಟೆ.

ಕೊಟೇಷನ್ ಚಿಹ್ನೆಗಳು ಯಾವುದಾದರೂ ಒಂದು ಪಠ್ಯಭಾಗವನ್ನು ಉಲ್ಲೇಖಿಸುವುದಕ್ಕಾಗಿ ಬೇಕೇಬೇಕು. ಉಲ್ಲೇಖಿಸುವಾಗ ಕೊಟೇಷನ್ ಚಿಹ್ನೆಗಳ ನಡುವೆ ಸರಿಯಾದ ಶಬ್ದಗಳಿರುವುದು ಅತ್ಯಗತ್ಯ. ಶಿವರಾಮ ರಾಯರು

ಒಬ್ಬ ಪ್ರಸಿದ್ಧ ಕವಿ ಎನ್ನೋಣ. ಅದನ್ನೇ ಬರೆಯುವಾಗ ಪ್ರಸಿದ್ಧ ಎಂಬುದಕ್ಕೋ ಕವಿ ಎಂಬುದಕ್ಕೋ ಕೊಟೇಷನ್ ಚಿಹ್ನೆಗಳನ್ನು ಹಾಕಿದರೆ ಮೂಲಾರ್ಥವೇ ಬುಡಮೇಲಾಗುತ್ತದೆ. ಆದ್ದರಿಂದ ಈ ಚಿಹ್ನೆಗಳನ್ನು ಬಳಸುವಾಗ ತೀರಾ ಎಚ್ಚರದಿಂದಿರಬೇಕು. ಕತೆ–ಕಾದಂಬರಿಗಳಲ್ಲಿ ಪಾತ್ರಗಳ ಮಾತುಗಳಿಗೆ ಈ ಚಿಹ್ನೆಗಳು ಪ್ರಾಣವಾಯುವಿದ್ದಂತೆ. ಈಚೆಗೆ ನೊಬೆಲ್ ಪ್ರಶಸ್ತಿ ವಿಜೇತ ಪೋರ್ಚುಗೀಸ್ ಲೇಖಕ ಹೋಸೆ ಸರಮಾಗೋನ ಕೆಲವು ಕಾದಂಬರಿಗಳನ್ನು ಓದಿದ ಮೇಲೆ ಈ ಕೊಟೇಷನ್ ಮಾರ್ಕ್‌ಗಳ ಗೊಡವೆಯಾದರೂ ಯಾಕೆ ಎಂದು ನನಗನ್ನಿಸಿತು. ಸರಮಾಗೋ ಪುಟಗಟ್ಟಲೆ ಬರೆಯುವ ಒಂದೇ ವಾಕ್ಯದಲ್ಲಿ ಒಬ್ಬಿಬ್ಬರಲ್ಲ, ಹಲವಾರು ಮಂದಿ ಆಡುವ ಮಾತುಕತೆಗಳಿಗೆ ತತ್ರಾಪಿ ಈ ಕೊಟೇಷನ್ ಮಾರ್ಕುಗಳೇ ಇಲ್ಲ.

'ಕೊನೆಗೂ ಉಳಿಯುವುದು ಸತ್ಯವೊಂದೇ' ಎಂದರು ಕವಿ ಅಡಿಗರು. ಬರಹವೊಂದರಲ್ಲಿ ನಿಜಕ್ಕೂ ಕೊನೆಗೆ ಉಳಿಯುವುದು ಫುಲ್‌ಸ್ಟಾಪ್ ಅಥವಾ ಪೂರ್ಣವಿರಾಮ. ಈ ಚಿಹ್ನೆ 'ಇಲ್ಲಿಗೇ ಕತೆ ಮುಗಿಯಿತು' ಎಂದು ಬಿಡುತ್ತದೆ. ನಿಮಗೆ ಬೇಕಾದ ಅಥವಾ ನೀವು ನಿರೀಕ್ಷಿಸಿದ ಭಾವನೆ / ವಿಚಾರಗಳು ಸಿಕ್ಕದಿದ್ದರೂ ಲೇಖಕ ಕೊಡಬಯಸಿದ್ದನ್ನೆಲ್ಲ ನೀವು ಪಡೆದದ್ದಾಯಿತು ಎನ್ನುತ್ತದೆ ಪೂರ್ಣವಿರಾಮ. ಒಂದು ವಾಕ್ಯ ಮುಗಿದ ನಂತರ 'ಇನ್ನು ಮುಂದೆ ಸರಿ' ಎಂದು ನಿಮ್ಮನ್ನು ಮುನ್ನೂಕುತ್ತದೆ ಅದು. ಅಷ್ಟೇನೆ? ಕಲಾವಿದ ಒಂದು ಕಪ್ಪು ಚುಕ್ಕೆ ಇಡಲಿ. ನಮಗೆ ಅದೊಂದು ಪೂರ್ಣ ವಿರಾಮ, ಸರಿ. ಆದರೆ ಅದೇ ಆ ಕಲಾವಿದನಿಗೆ ಲಹರಿ ಬಂದರೆ ಒಂದು ರೇಖಾ ಚಿತ್ರವಾದೀತು. ಬಿಂದುವಿನಲ್ಲಿ ಸಿಂಧು ಎಂದರೆ ಇದೇ ಅರ್ಥ. ಒಳ್ಳೆಯ ಕೃತಿಯೊಂದನ್ನು ಓದಿದಾಗ ಅದರ ಧ್ವನಿ ಅಂತ್ಯದಲ್ಲಿ ಹಾಜರಿ ಹಾಕಿದ ಪೂರ್ಣ ವಿರಾಮವನ್ನೂ ದಾಟಿಬಿಟ್ಟಿರುತ್ತದೆ.ಮೂವತ್ತು ವರ್ಷಗಳ ಹಿಂದೆ ನಾನು ಓದಿದ ಒಂದು ಕವನ ಪೂರ್ಣವಿರಾಮವನ್ನು ಕುರಿತದ್ದು. ರಷ್ಯನ್ ಕವಿ ಆಂದ್ರೇಯ್ ವೋಜ್ನೆಸೆನ್‌ಸ್ಕಿಯ ಆ ಕವನವನ್ನು ಆಡೆನ್ ಇಂಗ್ಲಿಷಿಗೆ ಭಾಷಾಂತರಿಸಿದ್ದ.

A ballad? a ballad of full stop?
a knock-out drop?
what about the bullet that
punctuated Pushkin?

ಹೀಗೆ ಪ್ರಾರಂಭವಾಗುವ ಆ ಕವನದಲ್ಲಿ ಪುಷ್ಕಿನ್ನನ ಹೆಸರು ಬಂದದ್ದೇ, ಅರ್ಥಪೂರ್ಣ ಭಾವಾಭಿನಯ ಒಂದು ಉಜ್ವಲ ಮಿಂಚಿನಂತೆ ನಮ್ಮನ್ನು ಸೆಳೆದುಬಿಡುತ್ತದೆ. ಪುಷ್ಕಿನ್ ರಷ್ಯದ ಮಹಾಕವಿ; ದ್ವಂದ್ವ ಯುದ್ಧದಲ್ಲಿ ಎದುರಾಳಿಯ ಗುಂಡಿಗೆ ಬಲಿಯಾದವನು. ಕವನದಲ್ಲಿರುವ ಪುಷ್ಕಿನ್ನಿಗೆ ಬದಲಾಗಿ

ಬೇಕಾದರೆ ನಮ್ಮ ಗಾಂಧೀಜಿಯನ್ನೇ ಸೇರಿಸಿಕೊಳ್ಳಿ. ಗೋಡ್ಸೆ ಹಾರಿಸಿದ ಗುಂಡಿನಿಂದ ಗಾಂಧೀಜಿಗೆ ಪೂರ್ಣವಿರಾಮವೇನೋ ಸಿಕ್ಕಿತು. ಆದರೆ ಗಾಂಧೀವಾದಕ್ಕೆ ಪೂರ್ಣವಿರಾಮವುಂಟೆ?

ಈ ಕವನವಿರುವ 'Anti-worlds' ಎಂಬ ಸಂಕಲನವನ್ನು ಆ ಕಾಲದಲ್ಲಿ ನನಗಾಗಿ ಇಂಗ್ಲೆಂಡಿನಿಂದ ತರಿಸಿಕೊಟ್ಟವರು ಗಿರೀಶ್ ಕಾರ್ನಾಡರು. ಅವರಿಗೂ ಈ ಕವನ ತುಂಬಾ ಇಷ್ಟವಾಗಿ ಕಡೆಗೆ ನಾವಿಬ್ಬರೂ ಹತ್ತಾರು ದಿನ ಇದನ್ನು ಕನ್ನಡಕ್ಕೆ ತರಲು ಶ್ರಮಿಸಿದ್ದುಂಟು. ಏನು ಮಾಡಿದರೂ, ಎಷ್ಟು ತಲೆಕೆರೆದುಕೊಂಡರೂ ಇಂಗ್ಲಿಷಿನ ಆ Punctuated ಎಂಬ ಶಬ್ದವಿದೆಯಲ್ಲ, ಅದು ಆ ಕವನದಲ್ಲಿ ತೆರೆದು ತೋರಿಸುವ ಅರ್ಥ ಪರಂಪರೆಯನ್ನು ಮಾತ್ರ ನಾವು ಹಿಡಿಯಲಾಗಲಿಲ್ಲ. ಆ ಅರಿವು ಮೂಡಿದ್ದೇ ನಮ್ಮ ಅನುವಾದ ಸಾಹಸಕ್ಕೆ ಪೂರ್ಣವಿರಾಮ ಕೊಟ್ಟೆವು. ಹಾಗಾಗಿ ಕನ್ನಡಕ್ಕೆ ಬಂದು ಅಸು ನೀಗದೆ ಆ ಕವನ ಇಂಗ್ಲಿಷಿನಲ್ಲೇ ಬದುಕಿಕೊಂಡಿತು.

MARGIN — IN TEXT

insert word or letter
delete; delete and close up space
close up space
insert space
equalize space; make spaces between words or lines equal
begin new paragraph or continue last paragraph
center
flush left
flush right
reverse the order; transpose
ragged margin: don't justify lines
move text down / move text up
superscript or subscript ($\pi r^2$ or $H_2O$)
spell out (1 hr as one hour)

MARGIN — IN TEXT

set in small capital letters (SMALL CAPITAL LETTERS)
change from lowercase to (Capital)
set in italic or slanted typ
set in Roman type (Roma
set in boldface type (bold
wrong font or type style; set in correct type (corr
insert comma
insert period or colon
insert double quotation m (The Catbird Seat)
insert single quotation m apostrophe (today's new
insert hyphen (first-class
insert en dash (3–4 credi
insert em dash (required courses—stand-alones or
insert question mark (Who's on first?)
insert equals sign (1+1

# శ్రీకృష్ణభూపతిర్జయతి

శ్రీకృష్ణభూవరకృ

తస్సంఖ్యారత్నస్ఫురన్మహో

కోశః సంఖ్యాబోధకపదభా

జ్యాద్రావర్ణైః ప్రకాశితో

జీయాత్ ॥ శ్రీకృష్ణనృపమహా

శిరచితేరవ్యేచతురంగసారసర్వ

స్వే ముద్రావర్ణైః కటిబిచ్చేకర్ణా

ణ్యపిచ ప్రకాశితాన్యత్ర ॥



# ಪುಸ್ತಕ ವಿನ್ಯಾಸ: ನಡೆದು ಬಂದ ದಾರಿ

ಡಾ। ಅ.ಲ. ನರಸಿಂಹನ್

ಯಂತ್ರಗಳನ್ನು ಬಳಸಿ ಪುಸ್ತಕ ಮುದ್ರಣ ಕೈಗೊಳ್ಳುವುದಕ್ಕೆ ಮೊದಲೇ ಪುಟ-ವಿನ್ಯಾಸಗೊಳಿಸುವ ಕಲೆ ಆರಂಭವಾಗಿತ್ತು. ಕೈ-ಬರಹದ್ದೇ ಆದರೂ ಹತ್ತಾರು ಪ್ರತಿಗಳನ್ನು ಮಾಡಿ ರಟ್ಟುಕಟ್ಟುತ್ತಿದ್ದುದುಂಟು.ಕೆಲವೊಮ್ಮೆ ಈ ಪುಸ್ತಕಗಳು ಚಿತ್ರಗಳಿಂದ ಕೂಡಿರುತ್ತಿದ್ದವು. ಪಠ್ಯವಸ್ತು (ಟೆಕ್ಸ್ಟ್) ರಚಿಸುವವರೇ ಚಿತ್ರಗಳನ್ನೂ ಬರೆಯುತ್ತಿದ್ದಿರಬಹುದು. ಇಲ್ಲವೇ ಸೂಕ್ತವಾಗಿ ಖಾಲಿ ಜಾಗ ಇರಿಸಿ ಕಲಾವಿದರಿಂದ ಬರೆಸುತ್ತಿದ್ದಿರಬಹುದು. ಉಳಿದ ಪ್ರದೇಶಗಳಂತೆ ಕರ್ನಾಟಕದಲ್ಲಿ ಸಹ ಕಾಗದದ ಬಳಕೆ ಬಂದಮೇಲೆ ಚಿತ್ರಸಹಿತ ಪುಟವಿನ್ಯಾಸಕ್ಕೆ ಆದ್ಯತೆ ಬಂದಂತೆ ತೋರುತ್ತದೆ. ಅವೆಂದರೆ ದಖ್ಖನಿ ಅರಸರ ಕಾಲದಲ್ಲಿ ಅನೇಕ ಕೈಬರಹದ ಪುಸ್ತಕಗಳು ರಚನೆಯಾದವು. ಇವುಗಳಲ್ಲಿ ಕೆಲವುಗಳಲ್ಲಿಯಾದರೂ ಚಿತ್ರಸಮೇತ ಪಠ್ಯ ಇರುವುದು ಕಾಣಬಹುದು. ಈ ಒಂದು ರಚನಾ ಪದ್ಧತಿ ಸಹ ಪರ್ಷಿಯಾದಿಂದ ಮೊದಲಿಗೆ ಕರ್ನಾಟಕಕ್ಕೆ ಬಂದು ಅನಂತರ ಮೊಘಲರ ರಾಜ್ಯವನ್ನು ಪ್ರವೇಶಿಸಿತು. ಇಡೀ ಪುಟವನ್ನು ಕಲಾತ್ಮಕವಾಗಿಸಲು ಕಲಾವಿದನ ಅಗತ್ಯ ಬೇಕಾಯಿತು.

ಬಿಜಾಪುರದಲ್ಲಿ ಆದಿಲ್‌ಶಾಹಿಗಳು ರಾಜ್ಯವಾಳುತ್ತಿದ್ದು, ನುಜುಮ್-ಉಲ್-ಉಲೂಮ್, ರಸಪ್ರದೀಪ ಅಥವಾ ಸಂಗೀತ ರತ್ನಾಕರದ ಟೀಕೆ, ಆಜಾ ಇಬುಲ್-ಮುಖಾಲಕತ್, ಜವಾಹಿರ್-ಉಲ್-ಮಸ್ಕಿತ್-ಮಹಮದಿ, ಕಿತಾಬ್-ಇ-ನೌರಸ್, ರತನ್ ಕಲ್ಯಾಣ್, ಸಿಕ್‌ನಾಮ, ನಿಮತ್ ನಾಮ, ತಾರಿಫ್-ಇ-ಹುಸೇನ್ ಶಾ-ಬಾದ್ ಶಾ ಇತ್ಯಾದಿಯಾಗಿ ಸುಮಾರು ಹದಿನೈದು ಗ್ರಂಥಗಳು ನೋಡಸಿಗುತ್ತವೆ. ಕೆಲವು ಒಂದಕ್ಕಿತ ಹೆಚ್ಚಿನ ಪ್ರತಿಗಳು ದೊರೆಯುತ್ತವೆ. ಕೆಲವನ್ನು ಮುಂದಿನ ಕಾಲದಲ್ಲೂ ಪ್ರತಿಮಾಡಿಸಿದ್ದು ಪ್ರತಿಕಾರ ಒಳ್ಳೆಯ ಕಲಾವಿದನಾಗಿಲ್ಲದ ಪ್ರಯುಕ್ತ ಚಿತ್ರಗಳು ಜನಪದ ಶೈಲಿಯಲ್ಲಿವೆ. ಎರಡನೇ ಇಬ್ರಾಹಿಂ ( ೧೭ನೇ ಶತಮಾನದ ಆರಂಭ) ನ ಕಾಲದವರೆಗೆ ಪರ್ಶಿಯ ಚಿತ್ರಕಲೆಯ ಪ್ರಭಾವ ಇದೆಯೆಂದೂ ಅನಂತರ ದೇಶೀಕಲೆಯ ಅಂಶಗಳು ಸೇರ್ಪಡೆ ಆಯಿತೆಂದೂ ವಿದ್ವಾಂಸರ ಅಭಿಪ್ರಾಯ. ಮೊದಮೊದಲ ಚಿತ್ರಗಳಲ್ಲಿ ಪ್ರತಿ ಪುಟಗಳಿಗೂ ಸುಳಹುಹೊಳಹುಗಳಿಂದ ಕೂಡಿದ ಅಂಚು ಕಟ್ಟಿರುವುದು, ಚಿತ್ರಿತ ಭಾಗದಲ್ಲಿಯೂ ಆಕರ್ಷಕವಾಗಿ ಸಂಯೋಜಿಸಿರುವುದನ್ನು ಗಮನಿಸಬಹುದು. ಈ ಗ್ರಂಥಗಳಲ್ಲಿ ಹೆಚ್ಚಿನವು ಸಂಗೀತಶಾಸ್ತ್ರ ಕುರಿತವಾಗಿದ್ದು ಹಿಂದೂ ದೇವದೇವತೆಯರ ಸ್ತುತಿಗಳಿಂದ ಕೂಡಿವೆ. ಮೊಘಲರ ಆಸ್ಥಾನದಲ್ಲಿಯೂ ರಾಮಾಯಣ, ಭಾರತಗಳಲ್ಲದೆ ರಾಜರ ಇತಿಹಾಸ ಕುರಿತ ಗ್ರಂಥಗಳೂ ರಚನೆಯಾದವು. ಈ ಬಗೆಯ ಗ್ರಂಥಗಳಲ್ಲಿ ಪಠ್ಯದಿಂದ ಹೊರತೆಗೆದು ಕೇವಲ ಚಿತ್ರಗಳನ್ನೇ ಇರಿಸಿ ಅಧ್ಯಯನ



ಮಾಡಿರುವುದುಂಟು. ಆದರೆ ಅದು ಪೂರ್ಣ ಪ್ರಮಾಣದ ಅಧ್ಯಯನ ಆಗುವುದಿಲ್ಲ. ದಖ್ಖನಿ ಚಿತ್ರಕಲೆಯ ಮುಂದುವರಿದ ರೂಪವೆಂಬಂತೆ ರಾಜಾಸ್ಥಾನಿ ಚಿತ್ರಗಳ ರಚನೆಗಳಾದವು. ಚಿತ್ರಗಳು ಹೆಚ್ಚಾಗಿ ವೈಷ್ಣವ ಪರವಾದರೂ ರಾಗಮಾಲ, ಬಾರಾಮಾಸ ಮುಂತಾದ ಸಂಗೀತ ಪ್ರಧಾನ ಪಠ್ಯದೊಂದಿಗೆ ಚಿತ್ರಗಳು ಕಂಡುಬರುತ್ತವೆ. ಗೀತಗೋವಿಂದ, ಭಾಗವತ ಇತ್ಯಾದಿ ಕೃಷ್ಣಪರವಾದ ಚಿತ್ರಿತ ಗ್ರಂಥಗಳು ಅನೇಕ ಕಲಾವಿದರು ರಚಿಸಿದ್ದು ಅವುಗಳಲ್ಲಿಯ ಪುಟವಿನ್ಯಾಸಗಳು ಪುಟಗಳ ಒಟ್ಟು ಅಂದದಿಂದ ಹಾಗೂ ಚಿತ್ರಕಲೆಯ ದೃಷ್ಟಿಯಿಂದ ಅಧ್ಯಯನಯೋಗ್ಯವಾಗಿವೆ.

ಭಾರತದಲ್ಲಿ ಹದಿನೆಂಟನೆಯ ಶತಮಾನದಿಂದಲೇ ಮುದ್ರಣ ಕಲೆ ಆರಂಭವಾಯಿತು. ಎಂದರೆ ಒಂದೇ ಪಠ್ಯದ ಹಲವಾರು ಪ್ರತಿಗಳನ್ನು ಪಡೆಯಲು ಸಾಧ್ಯವಾಯಿತು. ಒಂದು ಅರ್ಥದಲ್ಲಿ ಈ ಹಂತದಿಂದ 'ಪುಸ್ತಕ ತಯಾರಿಕೆ' (ಬುಕ್ ಮೇಕಿಂಗ್) ನಿಯಮಬದ್ಧವಾಗಿ, ಒಂದು ಉದ್ಯಮವಾಗಿ ರೂಪುಗೊಂಡಿತು. ಟಿಪ್ಪುವಿನ ಮರಣಾನಂತರ ಬಂದಿದ್ದ ಬುಕನನ್ ನೀಡಿದ್ದ ವರದಿ ೧೮೦೭ರಲ್ಲಿ ಮುದ್ರಣವಾಗಿದ್ದು ಅದರಲ್ಲಿ ಮರದ ಪಡಿಯಚ್ಚು (ವುಡನ್ ಬ್ಲಾಕ್) ಗಳನ್ನು ಬಳಸಿದೆ. ಈ ರೀತಿ ಮರದ ಪಡಿಯಚ್ಚನ್ನು ಬಳಸುವ ಪದ್ಧತಿ ಈಚೆಗೂ ಇತ್ತು. ಕಥೆಗೆ ಬೇಕಾದ ಪೂರಕ ಚಿತ್ರಗಳನ್ನು ಕಲಾವಿದರಿಂದ ಬರೆಸಿ ಪರಿಣತರಿಂದ ತೆಳುವಾದ ಉತ್ತಮ ರೀತಿಯ ರೇಖೆಯಿಂದ ಕೂಡಿದ ಇಳಿಗೆತ್ತನೆಯ ಪಡಿಯಚ್ಚುಗಳನ್ನು, ಮುದ್ರಣವಾಗುವ ಅಕ್ಷರದ ಎತ್ತರಕ್ಕೆ ಹೊಂದಿಕೊಳ್ಳುವಂತೆ (ಅಂಗುಲದ .೯೧೮ ಭಾಗ) ತಯಾರಿಸಲಾಗುತ್ತಿತ್ತು. ಜಾಗತಿಕ ಯುದ್ಧದ ಕಾಲದಲ್ಲಿ ಸತುವಿನ ಬೆಲೆ ಹೆಚ್ಚಾದಾಗ ಮರದ ಪಡಿಯಚ್ಚುಗಳೆ ಅಗ್ಗವೆನಿಸುತ್ತಿತ್ತು. ಕಳೆದ ಶತಮಾನದ ಎರಡು ಮೂರನೇ ದಶಕದಲ್ಲಿಯೂ ಟಿ.ಎನ್. ಕೃಷ್ಣಯ್ಯಶೆಟ್ಟಿ ಪ್ರಕಟಿಸಿದ ಪುಸ್ತಕಗಳಲ್ಲಿ (ಬತ್ತೀಸ ಪುತ್ತಳಿ ಕಥೆ, ಅರಬಿಯನ್ ನೈಟ್ಸ್ ಇತ್ಯಾದಿ) ಮರದ ಪಡಿಯಚ್ಚುಗಳನ್ನು ಬಳಸಿದೆ. ಆ ಕಾಲದ ಪಂಚಾಂಗ ಲಗ್ನಪತ್ರಿಕೆಗಳಲ್ಲೂ ಬಳಕೆಯಲ್ಲಿದ್ದು ಮುದ್ರಣ ಸಾಮಗ್ರಿಗಳ ಅಂಗಡಿಯಲ್ಲಿ ಸಿದ್ಧ ಪಡಿಯಚ್ಚುಗಳು ಮಾರಾಟವಾಗುತಿದ್ದವು. ಇವುಗಳನ್ನು ಬಳಸಿ ಸಾಧ್ಯವಾದಷ್ಟು ಉತ್ತಮವಾಗಿ ಪುಟ ವಿನ್ಯಾಸಗೊಳಿಸಿದ್ದು ಇದು ಮುದ್ರಣಕಲೆಯ ಇನ್ನೊಂದು ತಿರುವು ಎಂದು ಹೇಳಬಹುದು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೇ ಅರಮನೆಯಲ್ಲಿ ಅಂಬಾವಿಲಾಸ ಮುದ್ರಾಕ್ಷರ ಶಾಲಾ ಎಂಬ ಶಿಲಾಕ್ಷರ ಮುದ್ರಣಾಲಯವೊಂದಿತ್ತು. ವಿಶೇಷ ಬಗೆಯ, ಸಪಾಟಾದ ಕಲ್ಲು ಚಪ್ಪಡಿಯ ಮೇಲೆ ಜಿಡ್ಡಿನಿಂದ ಕೂಡಿದ ಲೇಖನಿಯಲ್ಲಿ ಪಠ್ಯವಸ್ತು ಮತ್ತು ಚಿತ್ರಗಳೆರಡನ್ನೂ ಪುಟದ ಅಳತೆಗೆ ಸರಿಹೊಂದುವಂತೆ ಬರೆದು ಅದರ ಮೇಲೆ ಶಾಯಿ ಹಚ್ಚಿ, ಅದರ ಮೇಲೆ ಕಾಗದ ಇರಿಸಿ ಯಂತ್ರದ ಸಹಾಯದಿಂದ ಒತ್ತಿದಾಗ ಶಿಲೆಯ ಮೇಲೆ ಮೂಡಿಸಿದ ವಿನ್ಯಾಸ ಹಾಳೆಗೆ ವರ್ಗಾವಣೆಗೊಳ್ಳುತ್ತಿದ್ದವು. ಈ ಪದ್ದತಿಗೆ ಲಿಥೋಗ್ರಫಿ ಎಂದು ಕರೆಯುತ್ತಾರೆ. ಈ ಪದ್ಧತಿಯಲ್ಲಿ ಕಲ್ಲಿನ ಮೇಲೆ ಉಲ್ಟ (ರಿವರ್ಸ್) ಬರೆಯಬೇಕಿತ್ತು. ಇದಕ್ಕೆ ಪರಿಹಾರಾರ್ಥವಾಗಿ ವಿಶೇಷ ಬಗೆಯ ಕಾಗದವನ್ನು ಮುದ್ರಿತವಾಗಬೇಕಾದ ಹಾಳೆಯ ಅಳತೆಗೆ ಕತ್ತರಿಸಿ ಅದರ ಮೇಲೆ ಸಹಜವಾಗಿಯೇ ಬರೆದು ಅದನ್ನು ಕಲ್ಲ ಮೇಲೆ ಉಲ್ಟ ಇರಿಸಿ ವರ್ಗಾಯಿಸುವ, ನಂತರ ಮುದ್ರಿಸಿ ಪುಟಗಳನ್ನು ಅಳತೆಗೆ ತಕ್ಕಂತೆ ಮಡಿಸಿ ಪುಸ್ತಕ ರೂಪದಲ್ಲಿ ಹೊಲೆದು ರಟ್ಟುಕಟ್ಟಲಾಗುತ್ತಿತ್ತು. ವಿಶೇಷವಾಗಿ ಅರಮನೆಯಿಂದ ಹತ್ತಾರು ಗ್ರಂಥಗಳು ಹೊರಬಂದಿದ್ದು ಸೌಗಂಧಿಕಾ ಪರಿಣಯ, ಸಂಖ್ಯಾ ರತ್ನಕೋಶ ಇತ್ಯಾದಿಗಳನ್ನು ಉದಾಹರಿಸಬಹುದು. ಸೌಗಂಧಿಕಾ ಪರಿಣಯದಲ್ಲಿ ಸುಮಾರು ಒಂದು ಸಾವಿರ ಚಿತ್ರಗಳಿದ್ದು ಅನೇಕವು ಅರ್ಧಪುಟಗಳಷ್ಟಿವೆ. ಕೆಲವು ಇಡೀ ಪುಟಗಳನ್ನು ಆಕ್ರಮಿಸಿವೆ. ಮೊದಲ ಮುದ್ರಣದಲ್ಲಿ ಕೈಬರೆಹದಲ್ಲಿ ಪಠ್ಯವಿದ್ದು ಚಿತ್ರದ ವಿನ್ಯಾಸಕ್ಕೆ ಹೊಂದುವಂತಿದೆ. ಮರುಮುದ್ರಣ ಮೊದಲಿಗೆ ಇಪ್ಪತ್ತನೆಯ ಶತಮಾನದ ಆರಂಭದಲ್ಲಿಯೂ ಮತ್ತೆ ಪುನರ್‌ಮುದ್ರಣ ಈಚೆಗೆ ಆಗಿದ್ದು ಅದರಲ್ಲಿ ಚಿತ್ರವನ್ನು ಅಲ್ಲಲ್ಲಿ ಅನಪೇಕ್ಷಿತವಾಗಿ ಒಂದು ಬದಿಗೆ ಹಿಗ್ಗಿಸಿದ್ದು ಚಿತ್ರ ಬಂಧಕ್ಕೆ ದಕ್ಕೆಯುಂಟಾಗಿದೆ. ಅಲ್ಲದೆ ಪಠ್ಯವನ್ನು ಇಂದಿನ ಆಧುನಿಕ ಲಿಪಿಗೆ ಅಳವಡಿಸಿದ್ದು ಪರಸ್ಪರ ಪೂರಕವೆನಿಸುವುದಿಲ್ಲ. ಮತ್ತೊಂದು ಗ್ರಂಥ ಸಂಖ್ಯಾರತ್ನಕೋಶ ತೆಲುಗು ಲಿಪಿ ಮತ್ತು ಭಾಷೆಯಲ್ಲಿದ್ದು ಹೆಚ್ಚಾಗಿ ಚಿತ್ರಗಳು ಇಲ್ಲದೇ ಇದ್ದರೂ ಪುಟವಿನ್ಯಾಸಕ್ಕೆ ಹೊಂದುವಂತೆ ವಿವಿಧ ಅಳತೆಯ ಚಿತ್ರಗಳನ್ನು, ಪಠ್ಯದೊಂದಿಗೆ ಅಳವಡಿಸಿರುವುದು, ಕೆಲವೊಮ್ಮೆ ಚಿತ್ರಗಳ ವಿವರಗಳನ್ನು ಅವುಗಳ ಪಕ್ಕದಲ್ಲಿಯೇ ನೀಡಿರುವುದೂ ಪುಟಗಳ ಒಟ್ಟು ಅಂದವನ್ನು ಲಕ್ಷ್ಯದಲ್ಲಿ ಇರಿಸಿಕೊಂಡಿರುವುದನ್ನು ಗಮನಿಸಬಹುದು. ಸಂಖ್ಯಾರತ್ನಕೋಶವನ್ನು ತಿರುಮಲಾಚಾರ್ಯ ಎಂಬಾತ ಕನ್ನಡಕ್ಕೆ ಅನುವಾದಿಸಿ ೧೮೫೬ರಲ್ಲಿ ತರಂಗಿಣಿ ಮುದ್ರಾಕ್ಷರ ಶಾಲೆಯಲ್ಲಿ

ಮುದ್ರಿಸಿರುವುದನ್ನು ಕಾಣಬಹುದು. ಇದಲ್ಲದೆ ಮುಮ್ಮಡಿ ಕೃಷ್ಣರಾಜರು ವಿರಚಿಸಿದ ಶ್ರೀ ಚಾಮುಂಡಿಕಾಂಬಾದಿ ಸಮಸ್ತ ದೇವತಾ ಸ್ತೋತ್ರಾವಳಿ ಎಂಬ ಗ್ರಂಥದಲ್ಲಿ ನೂರಕ್ಕೂ ಹೆಚ್ಚು ದೇವತೆಗಳ ಸ್ತುತಿಯಿದ್ದು ಪ್ರತಿಯೊಂದಕ್ಕೂ ಚಿತ್ರಗಳ ಸಮೇತ ಶ್ಲೋಕವನ್ನು ನೀಡಿದೆ. ಇದುಸಹ ಏಕವರ್ಣದ ರೇಖಾಚಿತ್ರದಲ್ಲಿ ಮುದ್ರಣವಾಗಿ ನಂತರ ಬಣ್ಣಹಚ್ಚಿರುವುದು.

ಮುಮ್ಮಡಿಯವರ ನಂತರ ಸುಮಾರು ನೂರು ವರ್ಷ ಮೈಸೂರಿನ ಮುದ್ರಣ ಕ್ಷೇತ್ರದಲ್ಲಿ ಹೆಚ್ಚಿನ ಬದಲಾವಣೆ ಆದಂತೆ ಕಂಡುಬರುವುದಿಲ್ಲ. ೧೮೪೩ರಲ್ಲಿ ಮೊದಲ ಕನ್ನಡ ಪತ್ರಿಕೆ ಮಂಗಳೂರು ಸಮಾಚಾರ ಮೋಗ್ಲಿಂಗ್ ಅವರು ಹೊರತಂದರು. ಅದೂ ಸಹ ಕಲ್ಲಚ್ಚಿನಲ್ಲಿಯೇ ಮುದ್ರಣವಾಗಿತ್ತು. ಆದರೆ ಆವೇಳೆಗೆ ಬಿಡಿ ಅಕ್ಷರಗಳ ಮುದ್ರಣ ಕರ್ನಾಟಕದಲ್ಲಿಯೂ ಆರಂಭವಾಗಿದ್ದು ಮೋಗ್ಲಿಂಗರ ಪತ್ರಿಕೆ ಬಳ್ಳಾರಿಗೆ ವರ್ಗಾವಣೆಗೊಂಡಿತು. ಬೆಂಗಳೂರಿನಲ್ಲಿ ಸರ್ಕಾರಿ ಮುದ್ರಣಾಲಯ ಆರಂಭವಾಗಿ ಗ್ಯಾಸೆಟ್ (ರಾಜ್ಯಪತ್ರ) ಮುದ್ರಣ ಆಗತೊಡಗಿತು. ಈ ವೇಳೆಗೆ ಮುದ್ರಣ ಎಂಬುದು ಒಂದು ತಂತ್ರಜ್ಞಾನವಾಗಿ ಬೆಳೆದಿತ್ತು. ಇಂಗ್ಲಿಷ್ ಭಾಷೆಯಲ್ಲಿ ' ೨೬ ' ಅಕ್ಷರಗಳು ಮಾತ್ರ ಇದೆ ಎಂಬುದೇ ಜನಜನಿತ. ಆದರೆ ೨೬ ದೊಡ್ಡಕ್ಕರಗಳು (ಕ್ಯಾಪಿಟಲ್) + ೨೬ ಚಿಕ್ಕಕ್ಷರಗಳು (ಲೋಯರ್ ಕೇಸ್) + ೨೬ ಚಿಕ್ಕ ಅಳತೆಯ ದೊಡ್ಡಕ್ಷರಗಳು (ಸ್ಮಾಲ್ ಕ್ಯಾಪಿಟಲ್ಸ್) + ಇವೆಲ್ಲಕ್ಕೂ ಓರೆ ಅಕ್ಷರಗಳು (ಇಟಾಲಿಕ್ಸ್) + ದಪ್ಪ ಅಕ್ಷರಗಳು (ಬೋಲ್ಡ್) + ಎಞ ಮತ್ತು ಒಞಗಳ ಸಂಯುಕ್ತಾಕ್ಷರಗಳು (ಲಿಗೇಚರ್ಸ್) + ಬೇರೆ ಭಾಷೆ ಬಳಸುವಾಗ ಸಂಕೇತಾಕ್ಷರಗಳು (ಡಯಾಕ್ರಿಟಿಕಲ್ ಮಾರ್ಕ್ಸ್) + ಅಡಿ ಟಿಪ್ಪಣಿಗಳಿಗೆ ಬಳಸುತ್ತಿದ್ದ ಕೆಲವು ಸಂಕೇತಗಳು ಬಳಕೆಯಲ್ಲಿ ಇರುತ್ತಿತ್ತು. ಎಂದರೆ ಒಬ್ಬ ಅಕ್ಷರ ಜೋಡಣೆಕಾರ (ಕಂಪೋಸರ್) ಇಷ್ಟೂ ಅಚ್ಚಿನ ಮೊಳೆಗಳ ಬಗ್ಗೆ ತಿಳುವಳಿಕೆ ಹೊಂದಿರಬೇಕಿತ್ತು. (ಅಂದಿನ ಸರ್ಕಾರಿ ಮುದ್ರಣಾಲಯದ ಅಕ್ಷರ ಜೋಡಣೆಗಾರನಿಗೆ ಕನಿಷ್ಠ ಮೂರನೆ ತರಗತಿಯ ವಿದ್ಯಾಭ್ಯಾಸ ಪಡೆದಿದ್ದರೆ ಸಾಕಿತ್ತು). ಮೇಲಿನ ಪ್ರತಿಯೊಂದು ವಿಭಾಗದ ಅಕ್ಷರಗಳಿಗೂ ಅದರದೇ ಆದ ಪ್ರಾಮುಖ್ಯತೆಯಿದೆ. ಉದಾಹರಣೆಗೆ ಒಂದು ಪದವನ್ನು ಹೆಚ್ಚು ಒತ್ತಿ ಹೇಳಲು ದಪ್ಪ ಅಕ್ಷರಗಳನ್ನು ಬಳಸಬೇಕಾಗುತ್ತದೆ. ಮೇಲಿನ ಸುಮಾರು ೧೪೦ ಬಗೆಯ ಅಕ್ಷರಗಳನ್ನೂ ಗ್ಯಾಸೆಟ್‌ನಲ್ಲಿ ಬಳಸಲಾಗುತ್ತಿತ್ತು. ಮೊದಲ ಸಾಲಿನ ಮೊದಲ ಅಕ್ಷರ ಉಳಿದವಕ್ಕಿಂತ ದೊಡ್ಡದಾಗಿರುತ್ತಿತ್ತು (ಬಿಗ್ಗರ್ ಫಾಂಟ್) ಅಲ್ಲಿಯೇ ಮೊದಲ ಸಾಲಿನಲ್ಲಿ ಸುಮಾರು ಮುಕ್ಕಾಲು ಭಾಗದಷ್ಟು ಚಿಕ್ಕ ದೊಡ್ಡಕ್ಷರಗಳು (ಸ್ಮಾಲ್ ಕ್ಯಾಪಿಟಲ್) ಇರಬೇಕಿತ್ತು. ಇವಲ್ಲದೆ ಪುಟದ ಅಂದಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಲು ಪದಗಳ ಮಧ್ಯೆ ತೆರಪು ನೀಡಲು ಹಲವಾರು ಬಗೆಯ ತೆರಪಿನ ಮೊಳೆಗಳಿದ್ದವು. ತೀರ ತೆಳುವಾದ (ಹೇರ್ ಸ್ಪೇಸ್)ನಿಂದ ಹಿಡಿದು ಆರು ಪೈಕಗಳವರೆಗೆ (ಪೈಕ ಎಂದರೆ ಇಂಗ್ಲಿಷ್‌ನ ಲೋಯರ್ ಕೇಸ್‌ನ 'ಎಂ' ಅಕ್ಷರದಷ್ಟು ಅಳತೆಯ ತೆರಪು) ವಿವಿಧ ಬಗೆಯ ತೆರಪಿನ ಮೊಳೆಗಳಿದ್ದವು. ಪದಗಳ ಮಧ್ಯೆ ಸಮಾನವಾಗಿ ತೆರಪುನೀಡುವುದು (ಈಕ್ವಲ್ ಸ್ಪೇಸ್) ಒಂದಾದರೆ ಅಕ್ಷರಗಳ ವಿನ್ಯಾಸ ಅನುಸರಿಸಿ ತೆರಪುನೀಡುವುದು ಮತ್ತೊಂದು. ಇದು ಅಕ್ಷರಗಳ ಹಿಂಚಾಚು ಹಾಗೂ ಮುಂಚಾಚುಗಳನ್ನು ಅನುಸರಿಸಿ ವೈಜ್ಞಾನಿಕವಾಗಿ ಸೂಚಿಸಲ್ಪಟ್ಟಿತ್ತು. ಈ ನಿಯಮ ಪೂರ್ಣವಿರಾಮ, ಅರ್ಧವಿರಾಮ, ಕೋಲನ್, ಸೆಮಿಕೋಲನ್ ಇತ್ಯಾದಿಗಳಿಗೂ ಅನ್ವಯವಾಗುತ್ತಿತ್ತು. ಇವೆಲ್ಲವನ್ನು ಇಂಗ್ಲಿಷ್ ಭಾಷೆಗೆ ಮಾತ್ರ ಅನುಸರಿಸಲಾಗುತ್ತಿತ್ತು.





ಕನ್ನಡದ ಬಿಡಿ ಅಕ್ಷರಗಳು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿಯೇ ವ್ಯಾಪಕವಾಗಿ ಬಳಕೆಗೆ ಬಂದಿತ್ತಾದರೂ ವೈಜ್ಞಾನಿಕವಾದ ಯಾವ ನಿಯಮವನ್ನೂ ಅನುಸರಿಸುತ್ತಿರಲಿಲ್ಲ. ಮುಖ್ಯವಾಗಿ ನಿಘಂಟುಗಳನ್ನು ಮುದ್ರಿಸುವಾಗ ಸಾಕಷ್ಟು ಪರಿಶ್ರಮಪಡಬೇಕಿತ್ತು. ಅಚ್ಚುಮೊಳೆಗಳ ಮುಖಭಾಗದ ಅಳತೆ (ಫೇಸ್)





ಬೇರೆಬೇರೆಯಾಗಿದ್ದರೂ ಒಡಲು ಒಂದೇ ಅಳತೆಗೆ ಬರುವಂತೆ ವಿಶೇಷವಾಗಿ ಅಚ್ಚುಮೊಳೆಗಳನ್ನು ಎರಕ ಹೊಯ್ಯಿಸುತ್ತಿದ್ದುದುಂಟು. ಕಿಟ್ಟಲ್ ಅವರ ಇಂಗ್ಲಿಷ್–ಕನ್ನಡ ನಿಘಂಟು ಈ ರೀತಿ ಪ್ರಕಟವಾಗಿತ್ತು. ಜಾಗತಿಕ ಮಹಾಯುದ್ಧಗಳವರೆವಿಗೂ ಕನ್ನಡ ಲಿಪಿಯ ವಿನ್ಯಾಸದಲ್ಲಿ ಹೆಚ್ಚಿನ ಬದಲಾವಣೆಗಳು ಕಂಡುಬರುವುದಿಲ್ಲ. ಆನಂತರ 'ಅನಂತ' 'ಶಾರದ' ಇವೇ ಮುಂತಾದ ದುಂಡನೆಯ ಮುಖದ ಸುಂದರ ಅಕ್ಷರಗಳು ರೂಪುಗೊಂಡವು. ಸರ್ಕಾರಿ ಮುದ್ರಣಾಲಯದಲ್ಲಿಯಲ್ಲದೆ ಹಲವಾರು ಖಾಸಗಿಯವರು ಅಕ್ಷರಗಳನ್ನು ಎರಕಹೊಯ್ಯುವ ಸಣ್ಣ ಪ್ರಮಾಣದ ಕಾರ್ಖಾನೆಗಳನ್ನು ಸ್ಥಾಪಿಸಿದರು. ಕನ್ನಡದಲ್ಲಿಯೂ ಎಂಟು ಪಾಯಿಂಟ್‌ಗಳಿಂದ ಮುವ್ವತ್ತಾರು ಪಾಯಿಂಟ್‌ಗಳವರೆಗೆ ಅಚ್ಚಿನ ಮೊಳೆಗಳು ದೊರಕುವಂತಾಯಿತು. ಇಷ್ಟಾದರೂ ಕನ್ನಡದಲ್ಲಿ ಪ್ರತಿಯೊಂದು ವ್ಯಂಜನಗಳಿಗೆ ನಾಲ್ಕು ಅಚ್ಚಿನ ಮೊಳೆಗಳು ಅವಶ್ಯವಿದ್ದವು. ಉದಾಹರಣೆಗೆ ಕ, ಕ, ಕಿ, ಕೆ. ತಲೆಕಟ್ಟು ಇಲ್ಲದ ಅಕ್ಷರಕ್ಕೆ ಕಾ, ಕೌ ಗಳನ್ನು, ಕಿ+ೀ, ಕೆ+ೀ, ಕ+ ು, ಕ+ ೂ, ಕೆ+ೀ, ಕ+ೃ , ಕೆ+ ೂ, ಕೆ+ ೂೀ, ಕ+ಂ, ಕ+ಃ ಎಂಬಂತೆ ಅಕ್ಷರಜೋಡಣೆ ಮಾಡಬೇಕಿತ್ತು. ಒತ್ತಕ್ಷರಗಳು ್ಕ ' ್ಖ ' ್ಗ ' ್ಘ ' ಇತ್ಯಾದಿಯಾಗಿ ಬೇರೆ ಬೇರೆಯಾಗಿ ಇರುತ್ತಿದ್ದವು. ಪುಟವಿನ್ಯಾಸಕ್ಕೆ ಇವೆಲ್ಲವನ್ನು ಹೊಂದಿಸುವುದು ಒಂದು ಕಲೆಯೇ ಆಗಿತ್ತು.

ಈ ಹಂತದಲ್ಲಿ ಕೆಲವು ಕಲಾವಿದರು ಮುದ್ರಣಾಲಯವನ್ನು ತೆರೆದಿದ್ದು ಪುಸ್ತಕಗಳ ಚಂದಕ್ಕೆ ಹೆಚ್ಚು ಗಮನ ನೀಡುವಂತಾಯಿತು. ಚಾಮರಾಜನಗರದ ಪದ್ಮರಾಜ ಪಂಡಿತರು ೧೮೯೦ರ ವೇಳೆಗೆ ಮುದ್ರಣಾಲಯ ತೆರೆದಿದ್ದು ೧೮೯೪ರ ವೇಳೆಗೆ ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಗೆ ಮುದ್ರಣಾಲಯವನ್ನು ವರ್ಗಾಯಿಸಿದರು. ಹಳೆಯ ಗ್ರಂಥಗಳನ್ನು ಹೊಸಗನ್ನಡ ಲಿಪಿಯಲ್ಲಿ ಮುದ್ರಿಸಿದ್ದಲ್ಲದೆ, ಸ್ವತಃ ಕಲಾವಿದರಾಗಿದ್ದ ಪಂಡಿತರು ಜೈನಮತೀಯ ಧಾರ್ಮಿಕ ಪುರುಷರ, ಕಥೆಗಳ ಚಿತ್ರಗಳು ಮತ್ತು ಶಾಲಾಮಕ್ಕಳಿಗೆ ಅನುಕೂಲವಾಗುವಂತೆ ವಿವಿಧ ದೇಶಗಳ ನಕ್ಷೆಗಳನ್ನು ತಾವೇ ರಚಿಸಿ ಮುದ್ರಿಸಿದರು. ಇದೇ ಕಾಲದವರೇ ಆದ, ಮೂಲತಃ ಕೆಳದಿಯಿಂದ ಬಂದು ಬೆಂಗಳೂರಿನಲ್ಲಿ ನೆಲೆಸಿದ ಓ. ಲಿಂಗಣ್ಣಯ್ಯ ಅವರು ಸಹ ಕಲಾವಿದರಾಗಿದ್ದು ದೇಶವಿದೇಶಗಳ ನಕ್ಷೆಗಳನ್ನು, ಚಿತ್ರಗಳನ್ನು ರಚಿಸಿ ಮುದ್ರಿಸಿದರು. ಪ್ರತಿ ಪುಟಗಳೂ ರೇಖಾಚಿತ್ರಗಳಿಂದ ಕೂಡಿದ ರಾಮಾಯಣ, ಭಾರತಗಳನ್ನು ಪ್ರಕಟಿಸಿದರು. ಶಿವರಾಮ ಕಾರಂತರು ಸ್ವತಃ ಕಲೆಯನ್ನು ಕಲಿತು ತಮ್ಮ ಪುಸ್ತಕಗಳಲ್ಲಿ ಅಳವಡಿಸಿಕೊಂಡರು. ಸ್ವಂತ ಮುದ್ರಣಾಲಯವನ್ನು ಹೆಚ್ಚು ಕಾಲ ನಡೆಸದೇ ಹೋದರೂ ವಿಫುಲವಾದ ಚಿತ್ರಗಳಿಂದ ಕೂಡಿದ ಬಾಲಪ್ರಪಂಚ, ವಿಜ್ಞಾನಪ್ರಪಂಚಗಳ ಪುಟವಿನ್ಯಾಸ ಅಂದಿನ ಕಾಲಕ್ಕೆ ಹೊಸ ಪ್ರಯೋಗವೇ ಆಗಿತ್ತು. ಇಂದು ಚಿತ್ರಕಲೆಯಲ್ಲಿ ಉನ್ನತ ವ್ಯಾಸಂಗ ಮಾಡಿರುವ ಕೆಲವರು ತಮ್ಮದೇ ಮುದ್ರಣಾಲಯ ಹೊಂದಿದ್ದಾರೆ. ಇಲ್ಲವೇ ಗಣಕಯಂತ್ರ ಬಳಸಿ ಮುಖಪುಟ ಹಾಗೂ ಪಠ್ಯವಸ್ತುಗಳ ಪುಟಗಳನ್ನು ವಿನ್ಯಾಸ-ಗೊಳಿಸುತ್ತಿರುವುದು ಇಡೀ ಪುಸ್ತಕ ಕಲಾತ್ಮಕವಾಗಿ ಹೊರಬರುವಂತಾಗಿದೆ.

ಮಂಗಳೂರ ಸಮಾಚಾರ

೧೮೪೪

೧೦. ಕನ್ನಡದ ಪ್ರಪ್ರಥಮ ಪತ್ರಿಕೆ 'ಮಂಗಳೂರ ಸಮಾಚಾರ'ದ (೧೮೪೩-೪೪) ಕೊನೆಯ ಸಂಚಿಕೆ. ಬಳ್ಳಾರಿಗೆ ಸ್ಥಳಾಂತರಿಸಿ, ಬಿಡಿಮೊಳೆಗಳಿಂದ ಹೆಚ್ಚು ಪ್ರತಿಗಳನ್ನು ಮುದ್ರಿಸಿ, ಅದನ್ನು 'ಕಂನಡ ಸಮಾಚಾರ' ಎಂದು ಕರೆಯಬೇಕೆಂದುದರ ಪ್ರಸ್ತಾಪ ಈ ಸಂಪಾದಕೀಯದ ಕೊನೆಯಲ್ಲಿದೆ. [ಪುಟ ೪೮೩-೪೮೪]



KARNATAKA
Kavya Kalanidhi Series,
No 5.
CHANDRA PRABHA PURANAM
BY
AGGALA DEVA
VOLUME. I

ಅಗ್ಗಳದೇವ ವಿರಚಿತಂ
ಚಂದ್ರಪ್ರಭ ಪುರಾಣಂ.

ಮತ್ತು

ಮೈಸೂರು:

1901.

ಮೊದಮೊದಲ ಪುಸ್ತಕಗಳಲ್ಲಿ ಮುಖಪುಟಕ್ಕೆ ಹೆಚ್ಚಿನ ಆದ್ಯತೆ ನೀಡಿಲ್ಲ. ಪುಟಕ್ಕೆ ಹೊಂದುವಂತೆ ಅಂಚು ಕಟ್ಟಿ (ಬಾರ್ಡರ್) ಹಲವು ಅಳತೆಗಳ ಅಚ್ಚುಮೊಳೆಗಳನ್ನು ಬಳಸಿ ನಿರ್ವಹಿಸಿದ್ದಾರೆ. ನಂತರ ಮೂರು ಅಥವಾ ನಾಲ್ಕು ಬಣ್ಣಗಳಲ್ಲಿ, ಚಿತ್ರಕಲೆ ಬಳಸಿ ಮುದ್ರಿಸಿದ್ದು ಒಂದು ಸಾಧನೆ ಎಂಬಂತೆ ಜಾಹಿರಾತು ನೀಡಿರುವುದುಂಟು. ಆದರೆ ನಿಯತಕಾಲಿಕೆಗಳಿಗೆ ಮುದ್ರಣದಷ್ಟೇ ಪ್ರಾಚೀನತೆಯಿದೆ. ೧೮೫೦ರ ಸುಮಾರಿನಿಂದಲೇ ಕ್ರೈಸ್ತ ಮಿಶನರಿಗಳು ನಿಯತಕಾಲಿಕೆಗಳನ್ನು ಹೊರತರುತ್ತಿದ್ದು ಅವು ಹೆಚ್ಚಾಗಿ ಮತೀಯವಾಗಿದ್ದವು. ಮುಂದೆ ಸಾಹಿತ್ಯಕ ಪತ್ರಿಕೆಗಳು ಹೆಚ್ಚು ಅವಶ್ಯವಾದಂತೆ ಕಂಡುಬರುತ್ತದೆ. ಹಳೆಯ ಸಾಹಿತ್ಯ ಗ್ರಂಥಗಳನ್ನೂ ನಿಯತಕಾಲಿಕೆಯಂತೆ ಕಂತುಗಳಲ್ಲಿ ಪ್ರಕಟಿಸಲಾಗಿದೆ. ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿಯೇ ರಾಮಾನುಜ ಅಯ್ಯಂಗಾರ್, ಪದ್ಮರಾಜ ಪಂಡಿತರು, ಫ.ಗು. ಹಳಕಟ್ಟಿ ಇವರೇ ಮುಂತಾದವರು ಮಾಲಿಕೆಗೆ ನಿಶ್ಚಿತ ಹೆಸರು ನೀಡಿ ನಿಯಮಿತವಾಗಿ ಪ್ರಕಟಿಸಿದ್ದಾರೆ. ಗ್ರಾಹಕರು ಚಂದಾದಾರರಂತೆ ನೊಂದಣಿ ಮಾಡಿಕೊಳ್ಳಬಹುದಿತ್ತು. ಕೊಳ್ಳುವವರ ಕಿಸೆಗೆ ಹೆಚ್ಚು ಭಾರವಾಗುತ್ತಿರಲಿಲ್ಲ. ರಾಜ್ಯದ ಜಿಲ್ಲೆ, ತಾಲೂಕುಗಳಿಂದಲೂ ದಿನಪತ್ರಿಕೆಗಳ ರೂಪದಲ್ಲಿಯೇ ಸುದ್ದಿಪತ್ರಿಕೆಗಳು ಅರ್ಧವಾರ, ವಾರ, ಪಾಕ್ಷಿಕಗಳಂತೆ ಹೊರಬರುತ್ತಿದ್ದವು. (ಇದಕ್ಕೆ ಅಚ್ಚುಮೊಳೆಗಳ ಸಂಗ್ರಹದ ಅಭಾವವೇ ಕಾರಣವಾಗಿತ್ತು!)

ನಿಯತಕಾಲಿಕೆಗಳಲ್ಲೂ ಪುಟವಿನ್ಯಾಸಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದವರು ಶಿವರಾಮ ಕಾರಂತರೇ ಆಗಿದ್ದಾರೆ. ೧೯೩೨ರ ಸುಮಾರಿಗೆ ವಸಂತ ಎಂಬ ಮಾಸಪತ್ರಿಕೆ ಆರಂಭಿಸಿ ಚಿತ್ರ ಮತ್ತು ಛಾಯಾಚಿತ್ರಗಳನ್ನು ಸಾಕಷ್ಟು ಬಳಸಿದ್ದಾರೆ. ಹತ್ತುವರ್ಷಗಳ ನಂತರ ಬಾಲಪ್ರಪಂಚವನ್ನು ನಿಯತಕಾಲಿಕೆಯಂತೆ ತಂದು ವಾರ್ಷಿಕವಾಗಿ ಒಟ್ಟು ಸಂಚಿಕೆಗಳನ್ನು ಒಂದಾಗಿಸಿ ರಟ್ಟುಕಟ್ಟಿ ವಿತರಣೆಮಾಡಿದ್ದುಂಟು. ಮುವತ್ತರಲ್ಲಿಯೇ ಅ.ನ. ಸುಬ್ಬರಾಯರು ಕಲಾ ಎಂಬ ಚಿತ್ರಕಲೆಗೆ ಹೆಚ್ಚು ಗಮನವಿರಿಸಿದಂತಹ ಪತ್ರಿಕೆಯನ್ನು ತಂದರು. ಅದರಲ್ಲಿ ಕಥೆ, ನಾಟಕ ಇತ್ಯಾದಿಗಳಿದ್ದರೂ ಬಣ್ಣದ ಪಡಿಯಚ್ಚುಗಳನ್ನು ಕೋಲ್ಕೊತದಿಂದ ತರಿಸಿ ಪುನರ್‌ಮುದ್ರಿಸಿದ್ದಾರೆ. ಸಾಕಷ್ಟು ಛಾಯಾಚಿತ್ರಗಳೂ ರೇಖಾಚಿತ್ರಗಳೂ ಇವೆ. ಇದೇ ಸುಮಾರಿಗೆ ಬರುತ್ತಿದ್ದ ರಂಗಭೂಮಿ ಪತ್ರಿಕೆಯಲ್ಲಿಯೂ ಹೊರರಾಜ್ಯಗಳಿಂದ ಬಣ್ಣದ ಪಡಿಯಚ್ಚುಗಳನ್ನು ತರಿಸಿ ಮುದ್ರಿಸಿದ್ದಾರೆ. ಉಳಿದಂತೆ ಮೈಸ್ ಇಂಡಿಯಾ, ಜನಪ್ರಗತಿ, ಪ್ರಜಾಮತ, ಗೋಕುಲ, ಪ್ರಪಂಚ, ಕರ್ಮವೀರ ಇವೇ ಮುಂತಾದ ಅನೇಕ ಪತ್ರಿಕೆಗಳು ಪೂರಕಚಿತ್ರ (ಇಲಸ್ಟ್ರೇಷನ್), ಛಾಯಾಚಿತ್ರಗಳನ್ನು ಬಳಸುವ ಪ್ರಾಮುಖ್ಯತೆಯನ್ನು ಕಂಡುಕೊಂಡವು. 'ಸುಧಾ' ನಂತರ 'ತರಂಗ' ವಾರಪತ್ರಿಕೆಗಳು ಬಂದಮೇಲೆ ನಿಯತಕಾಲಿಕೆಗಳ ಸ್ವರೂಪವೇ ಬದಲಾಯಿತು. ಒಂದು ಕಾಲಕ್ಕೆ ಸುಧಾ ಪತ್ರಿಕಾ ಬಳಗದಲ್ಲಿ ಸುಮಾರು ಹತ್ತು ಕಲಾವಿದರು ಖಾಯಂ ನೌಕರರಾಗಿದ್ದರು. ಕಲೆಗೆ, ಕಲಾತ್ಮಕತೆಗೆ ನೀಡಿದ ಪ್ರೋತ್ಸಾಹ ಅನನ್ಯವಾದುದು. ಪ್ರಜಾವಾಣಿ ಪತ್ರಿಕೆಯ (ದ ಮೈಸೂರ್ ಪ್ರಿಂಟಿಂಗ್ ಎಂಡ್ ಪಬ್ಲಿಷಿಂಗ್ ಲಿ.,) ಬಳಗದ ಪತ್ರಿಕೆಗಳಿಗೆ ವಿಶಿಷ್ಟ ರೀತಿಯಲ್ಲಿ ಇಡೀ ಪುಟಗಳನ್ನು ಅಚ್ಚುತೆಗೆದು ರೋಟರಿ ಯಂತ್ರದಲ್ಲಿ ಮುದ್ರಿಸಲಾಗುತ್ತಿತ್ತು. ಅಚ್ಚು ತೆಗೆದ ಮೇಲೆ ಯಾವುದೇ ರೀತಿಯ ಬದಲಾವಣೆ ಅಥವಾ ತಿದ್ದುಪಡಿಗಳಿಗೆ ಅವಕಾಶ ಇರಲಿಲ್ಲ. ಉಳಿದವು






ಅಕ್ಷರಜೋಡಣೆ ಮಾಡಿ ಸಿಲಿಂಡರ್ ಯಂತ್ರದಲ್ಲಿ ಮುದ್ರಣಗೊಳ್ಳುತ್ತಿತ್ತು. ಇಲ್ಲಿ ಮುದ್ರಣದ ಹಂತದಲ್ಲಿಯೂ ತಿದ್ದುಪಡಿಗಳಿಗೆ ಅವಕಾಶವಿತ್ತು. ಆಫ್‌ಸೆಟ್ ಮುದ್ರಣ ಬಳಕೆಗೆ ಬಂದಾಗ ಪುಟ ವಿನ್ಯಾಸದಲ್ಲಿ ಮತ್ತೊಮ್ಮೆ ಮಹತ್ತರವಾದ ಬದಲಾವಣೆ ಆಯಿತು. ಸಾಹಿತ್ಯಕ್ಕೆ ಸಂಬಂಧಿಸಿದ ಕಾದಂಬರಿ, ಕವನ ಸಂಕಲನ, ನಾಟಕ ಇತ್ಯಾದಿಗಳಲ್ಲಿ ಪುಸ್ತಕದ ಒಳಗೆ ಚಿತ್ರಗಳ ಅವಶ್ಯಕತೆ ಇರುತ್ತಿರಲಿಲ್ಲ. ಆದರೆ ವಿಜ್ಞಾನ, ಪ್ರವಾಸ ಕಥನ, ಕಲೆಗಳು ಇತ್ಯಾದಿ ಕುರಿತ ಪುಸ್ತಕಗಳಲ್ಲಿ ಚಿತ್ರ, ರೇಖಾಚಿತ್ರ, ಛಾಯಾಚಿತ್ರಗಳ ಅವಶ್ಯಕತೆ ಇತ್ತು.. ಕೆ.ಎಸ್. ನರಸಿಂಹಸ್ವಾಮಿ ಅವರು ತಮ್ಮ 'ಮೈಸೂರು ಮಲ್ಲಿಗೆ' ಕವನ ಸಂಕಲನದ ಮೊದಲಿನ ಕೆಲವು ಮುದ್ರಣಗಳಲ್ಲಿ ಪದ್ಯಗಳಿಗೆ ಕಲಾವಿದ ಪುರುಷೋತ್ತಮ ಅವರು ಬರೆದ ಪೂರಕಚಿತ್ರಗಳನ್ನು ಸೇರಿಸಿದ್ದಾರೆ.

ಕಾಗದದ ಅಳತೆಗಳೂ ನಾಲ್ಕೈದು ಬಗೆಯಲ್ಲಿವೆ. ಅವೆಂದರೆ ಫೂಲ್ಸ್‌ಕೇಪ್, ಕ್ರೌನ್, ಡೆಮಿ ಮತ್ತು ರಾಯಲ್. ಮೆಟ್ರಿಕ್ ಅಳತೆಯ ಕಾಗದ ಹಿಂದೆಯೇ ಬಳಕೆಗೆ ಬಂದಿದ್ದು ಸರ್ಕಾರಿ ರಾಜ್ಯಪತ್ರಗಳಲ್ಲಿ ಬಳಕೆಯಾಗುತ್ತಿತ್ತು. ಈಚೆಗೆ ಮಾರುಕಟ್ಟೆಯಲ್ಲಿ ದೊರೆಯುತ್ತಾದರೂ ಸಾಮಾನ್ಯ ಮುದ್ರಣಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿಲ್ಲ. ಚಿತ್ರಕಲೆಗೆ ಸಂಬಂಧಿಸಿದ ಅಥವಾ ಚಿತ್ರಮಯ ಪುಸ್ತಕಗಳನ್ನು (ಕಾಫೀ ಟೇಬಲ್ ಬುಕ್‌ಗಳು) ಮೇಲಿನ ಯಾವುದಾದರೂ ಬಗೆಯ ಕಾಗದವನ್ನು ಚಚ್ಚೌಕವಾಗುವಂತೆ ರೂಪಗೊಳಿಸಿ ಮುದ್ರಿಸುವುದುಂಟು. ಇದರಿಂದಾಗಿ ಒಂದು ಹಾಳೆಗೆ, ಒಂದು ಬದಿಗೆ ಆರು ಪುಟಗಳಂತೆ ಒಟ್ಟು ಹನ್ನೆರಡು ಪುಟಗಳಿಗೆ ಅಡಕವಾಗಿಸಬಹುದು. ಆದರೆ ಕಾಗದವನ್ನು ಹೊಂದಿಸಲು ಸ್ವಲ್ಪ ಭಾಗ ಕತ್ತರಿಸಿ ತೆಗೆಯಬೇಕಾದುದು ಅನಿವಾರ್ಯ. ಈ ಚೌಕ ವಿನ್ಯಾಸದಲ್ಲಿ ಕಲಾವಿದನಿಗೆ ಆಟವಾಡಲು ಹೆಚ್ಚಿನ ಅವಕಾಶವಿದೆ. ಉದ್ದನೆಯ ಇಲ್ಲವೆ ಅಡ್ಡಚಿತ್ರಗಳನ್ನು ಒಂದೇ ಪುಟದಲ್ಲಿ ಅಳವಡಿಸಬಹುದು. ಕಲೆಯ ಅಂಶವನ್ನು ಹೆಚ್ಚಾಗಿ ದುಡಿಸಿಕೊಳ್ಳಬಹುದು. ಹಿಂದೆ ಕಾಗದದ ಗುಣಮಟ್ಟ ಸಹ ತೀರ ಕಳಪೆಯಾಗಿತ್ತು. ನೂರು ವರ್ಷಗಳ ಹಿಂದೆ ಮುದ್ರಿತವಾದ ಅನೇಕ ಪುಸ್ತಕಗಳ ಪುಟಗಳನ್ನು ತೀರಾ ಜೋಕೆಯಾಗಿ ತಿರುವಬೇಕಾಗುತ್ತದೆ. ಇಲ್ಲವಾದರೆ ಪುಡಿ-ಪುಡಿಯಾಗಿ ಒಡೆದುಹೋಗುತ್ತವೆ. ಆದರೆ ಇದಕ್ಕೂ ಹಿಂದೆ ಮುದ್ರಿತವಾದ ಸಾಕಷ್ಟು ಪಸ್ತಕಗಳು ಇಂದಿಗೂ ಗಟ್ಟಿ-ಮುಟ್ಟಾಗಿವೆ. ಈಗ ಪರಿಸರಸ್ನೇಹಿಯಾದವುಗಳೂ ಸೇರಿದಂತೆ ಹತ್ತಾರು ನಮೂನೆಯ ಕಾಗದಗಳು ದೊರೆಯುತ್ತವೆ.



ಕಾಗದದ ಬಗ್ಗೆ ಸ್ವಲ್ಪ ಹೆಚ್ಚಿಗೆ ಹೇಳಲು ಕಾರಣವಿದೆ. ಕಲಾವಿದನಿಗೆ ನಾವು ಬಳಸುವ ಕಾಗದದ ಅಳತೆ ಆಧರಿಸಿದ ಪುಸ್ತಕದ ಅಳತೆ ನೀಡಬೇಕಾದುದು ಅವಶ್ಯಕ. ಅದಕ್ಕೆ ಅನುಗುಣವಾಗುವಂತೆ ಚಿತ್ರ ರಚಿಸಬೇಕಾಗುತ್ತದೆ. ಉದಾಹರಣೆಗೆ ಕ್ರೌನ್ ೧ / ೮ ಅಳತೆಯ ಪುಸ್ತಕಕ್ಕೆ ಕಲಾವಿದ ಪುಸ್ತಕದ ಒಳಗೆ ಪಠ್ಯದ ಜೊತೆಗೆ ಹಾಕಲು ಇಲ್ಲವೆ ಮುಖಪುಟ ರಚಿಸಲು ಈ ಅಳತೆಯನ್ನು ನೀಡಬೇಕಾಗುತ್ತದೆ. ಅದೇ ಡೆಮಿ ೧ / ೮ ಅಳತೆಯ ಪುಸ್ತಕಕ್ಕೆ ಬೇರೆಯದೇ ಅಳತೆ ಬೇಕಾಗುತ್ತದೆ. ಈ ಸಂದರ್ಭದಲ್ಲಿ ಎರಡು ಉದಾಹರಣೆಗಳನ್ನು ನೀಡಬಹುದೆನಿಸುತ್ತದೆ. ಚಂದಮಾಮ ಪತ್ರಿಕೆಯ ಕಾಗದದ ಅಳತೆ ಸ್ವಲ್ಪ ಬೇರೆಯಾದುದು. ಪ್ರಾಯಶಃ



ಇಂಪೀರಿಯಲ್ ಅಳತೆಗೆ ಹೊಂದುವಂತಹದು. ಕಾರಣ ಅಲ್ಲಿ ಮುಖಪುಟದ ಕಲಾವಿದರಾಗಿದ್ದ ಎಂ.ಟಿ.ವಿ. ಆಚಾರ್ಯ ಅವರು ಅದೇ ಅಳತೆಯ ಡ್ರಾಯಿಂಗ್ ಹಾಳೆಯಲ್ಲಿ ಜಲವರ್ಣದಲ್ಲಿ ಕೃತಿ ರಚಿಸುತ್ತಿದ್ದರು. (ಮುಂದೆ ಪತ್ರಿಕೆಯ ಮಾಲಿಕರು ಆ ಚಿತ್ರಗಳನ್ನು ತಮ್ಮ ಸ್ವತ್ತು ಎಂಬಂತೆ ಇರಿಸಿಕೊಡರು. ಇದು ಆಚಾರ್ಯರಿಗೆ ಸ್ವಲ್ಪ ಬೇಸರ ತರಿಸಿತಾದರೂ ಮತ್ತೆ ಮೂಲಚಿತ್ರದ ಪ್ರತಿಕೃತಿಯನ್ನು ಜಲ ಇಲ್ಲವೆ ತೈಲವರ್ಣದಲ್ಲಿ ರಚಿಸಿ ಇರಿಸಿಕೊಂಡರು.). ಅಂದಿನ ದಿನಗಳಲ್ಲಿ ( ನಾನು ಹೋಗಿದ್ದು ೧೯೬೫ರಲ್ಲಿ) ಚಿತ್ರಗಳಿಂದ ಕೂಡಿದ ಪಠ್ಯ ಮತ್ತು ಮುಖಪುಟಗಳ ವಿನ್ಯಾಸಗೊಳಿಸುವಲ್ಲಿ ಪಡುತ್ತಿದ್ದ ಶ್ರಮ ಅನನ್ಯವಾದುದು. ಆದರೂ ಅಂಚುಗಳಲ್ಲಿ ಹೆಚ್ಚು ಅವಕಾಶ ಬಿಡದೆ ಕತ್ತರಿಸಿದಲ್ಲಿ (ಫ್ಲೆಶ್ ಕಟ್) ಚಿತ್ರಬಂಧದ ಕೆಲಭಾಗ ಕತ್ತರಿಸಿಹೋಗುತ್ತಿತ್ತು. ಇನ್ನೊಮ್ಮೆ ಕಲಾ ಲೇಖನಗಳ ಪುಸ್ತಕವೊಂದು ಮುದ್ರಿಸಬೇಕಿದ್ದು ಅದರ ಅಳತೆ ೭ ೧/೨" ೭ ೧/೨" ಎಂದು ಭಾವಿಸಿ ಕಲಾವಿದರಿಗೆ ಆ ಅಳತೆಗೆ ಹೊಂದುವಂತೆ ಚಿತ್ರ ರಚಿಸಲು ಕೋರಲಾಗಿತ್ತು. ಅಂತೆಯೆ ಮುಖಪುಟ ಅಚ್ಚಾದ ಮೇಲೆ ಮುದ್ರಣಾಲಯದ ಅಚಾತುರ್ಯದಿಂದಾಗಿ ೭ ೧/೨ " ೭" ಗೆ ಕತ್ತರಿಸಲಾಗಿತ್ತು. ಇದು ಕಲಾವದರಿಗೆ ಬೇಸರ ತಂದಿತಲ್ಲದೆ ಅವರಿಂದ ಸಾಕಷ್ಟು ಬೈಗಳ ತಿನ್ನಬೇಕಾಯಿತು. ಇಂತಹ ಪ್ರಸಂಗಗಳಿಂದ ಕಲಾವಿದ ಕೃತಿರಚನೆಗೆ ಹಾಗೂ ವಿನ್ಯಾಸಕ್ಕೆ ನೀಡುವ ಪ್ರಾಮುಖ್ಯತೆಯ ಅರಿವಾದೀತು.



ಪುಟವಿನ್ಯಾಸದಲ್ಲಿ ಹೆಚ್ಚು ಕ್ರಿಯಾಶೀಲತೆಯನ್ನು ಆಹ್ವಾನಪತ್ರಿಕೆಗಳಲ್ಲಿ, ಗುರುತು ಚೀಟಿಗಳಲ್ಲಿ (ವಿಸಿಟಿಂಗ್ ಕಾರ್ಡ್) ಗಳಲ್ಲಿ, ಜಾಹಿರಾತಿಗಾಗಿ ನೀಡುವ ಕೈಚೀಟಿಗಳಲ್ಲಿ (ಪಾಂಪ್ಲೆಟ್), ಚಿತ್ರಮಯ ಕೋಶಗಳಲ್ಲಿ, ಮಕ್ಕಳ ಪುಸ್ತಕಗಳಲ್ಲಿ ಇತ್ಯಾದಿ ನಮೂನೆಯ ಮುದ್ರಣಗಳಲ್ಲಿ ಕಾಣಬಹುದಾಗಿತ್ತು. ಕೆಲವು ಮುದ್ರಣಾಲಯಗಳು ಈ ಬಗೆಯ ಕಲಾತ್ಮಕ ವಿನ್ಯಾಸಕ್ಕೆ ಹೆಸರುವಾಸಿಯಾಗಿದ್ದು ಉತ್ತಮ ಅಭಿರುಚಿ ಉಳ್ಳವರು ಹೆಚ್ಚಿನ ಮೌಲ್ಯ ತೆತ್ತಾದರೂ ಇಂತಹ ಮುದ್ರಣಾಲಯಗಳನ್ನು ಹುಡುಕಿಕೊಂಡು ಹೋಗುತ್ತಿದ್ದರು. ಈ ಅಚ್ಚುಕೂಟಗಳು ಯಾವುದೇ ಬಗೆಯ ಕೀಳು ಮಟ್ಟದ ಹೊಂದಾಣಿಕೆಯನ್ನು (ಕಾಂಪ್ರೊಮೈಸ್) ಮಾಡುತ್ತಿರಲಿಲ್ಲ. ಪಡಿಯಚ್ಚುಗಳು ತೃಪ್ತಿಕರವಾಗಿ ಇಲ್ಲದಿದ್ದಲ್ಲಿ ಮತ್ತೊಮ್ಮೆ ಪಡಿಯಚ್ಚುಗಳನ್ನು ಮಾಡಿಸುತ್ತಿದ್ದರು. ಅಂತೆಯೇ ಗ್ರಾಹಕನಿಗೆ ಒಪ್ಪಿಗೆಯಾಗದಿದ್ದಲ್ಲಿ ಆತನ ನಿರ್ದೇಶನದಂತೆ ಪುನರ್‌ಮುದ್ರಿಸಿ ನೀಡುತ್ತಿದ್ದರು. ಒಟ್ಟಿನಲ್ಲಿ ಮುದ್ರಣಾಲಯದವರು ತಮ್ಮ ಘನತೆಯನ್ನು ಕಾಪಾಡಿಕೊಳ್ಳುತ್ತಿದ್ದರು. ಈಗ ತಾಂತ್ರಿಕ ಸೌಲಭ್ಯಗಳು ಅಧಿಕವಾಗಿ ಬಂದಿವೆಯಾಧರೂ ಅವುಗಳದೇ ಸಮಸ್ಯೆಗಳೂ ಜೊತೆಗೂಡಿವೆ. ಅದು ಬೇರೊಂದೆ ಅಧ್ಯಾಯಕ್ಕೆ ಮುನ್ನುಡಿಯಾಗುತ್ತದೆ.



# ಕೃತಿಸ್ವಾಮ್ಯ ಮತ್ತು ಪುಸ್ತಕೋದ್ಯಮ



ವೈ.ಜಿ. ಮುರಳೀಧರ

ಒಬ್ಬ ಜನಪ್ರಿಯ ಲೇಖಕನ ಸಾಹಿತ್ಯ ಕೃತಿ ಅಧಿಕೃತವಾಗಿ ಬಿಡುಗಡೆ ಆಗುವ ಮುನ್ನವೆ ಅದರ ನಕಲಿ ಪ್ರತಿಗಳು ಮಾರುಕಟ್ಟೆಯಲ್ಲಿ ಅತ್ಯಂತ ಕಡಿಮೆ ಬೆಲೆಗೆ ದೊರೆಯುವುದನ್ನು ನಾವು ನೋಡುತ್ತಿದ್ದೇವೆ. ಈ ಕಳ್ಳವ್ಯಾಪಾರ ಕನ್ನಡ ಸಾಹಿತ್ಯಕ್ಕೆ ಅಷ್ಟಾಗಿ ತಟ್ಟಿಲ್ಲವಾದರೂ ಇಂಗ್ಲಿಷ್ ಹಾಗೂ ಇತರೆ ಭಾಷೆಗಳ ಪುಸ್ತಕೋದ್ಯಮದ ಮೇಲೆ ದಟ್ಟವಾದ ಪರಿಣಾಮ ಉಂಟುಮಾಡಿದೆ. ಜನಪ್ರಿಯ ಕಾದಂಬರಿಕಾರರಾದ ಹೆರಾಲ್ಡ್ ರಾಬಿನ್ಸ್, ಆರ್ಥರ್ ಹೈಲಿ, ಶಿಡ್ನಿ ಶೆಲ್ಡ್ ನ್, ರಾಬರ್ಟ್ ಲುಡ್ಲುಮ್, ಜೆ.ಕೆ. ರೌಲಿಂಗ್ ಮುಂತಾದವರ ಕಾದಂಬರಿಗಳಿಗೆ ವಿಶ್ವಾದ್ಯಂತ ಬೇಡಿಕೆ ಇರುವುದರಿಂದ ಅವರುಗಳ ಸಾಹಿತ್ಯ ಕೃತಿಗಳನ್ನು ನಕಲುಮಾಡಿ ಮಾರಾಟಮಾಡುವ ಒಂದು ಜಾಲವೇ ಸೃಷ್ಟಿಯಾಗಿದೆ. ನಕಲಿ ಪುಸ್ತಕಗಳ (ಪುಸ್ತಕ ಪೈರೆಸಿ) ಮಾರಾಟ ಒಂದು ಬೃಹತ್ ಉದ್ಯಮವಾಗಿ ಮಾರ್ಪಟ್ಟಿದೆ. ಸರ್ಕಾರಗಳು ಏನೆಲ್ಲಾ ಕ್ರಮ ಕೈಗೊಂಡಿದ್ದರೂ, ಯಾವುದೇ ರೀತಿಯ ಕಾನೂನು ಜಾರಿಗೊಳಿಸಿದ್ದರೂ, ನಕಲಿ ಪುಸ್ತಕಗಳ ಮಾರಾಟಕ್ಕೆ ಕಡಿವಾಣ ಹಾಕಲು ಆಗುತ್ತಿಲ್ಲ. ಕಾನೂನುಗಳಲ್ಲಿರುವ ಲೋಪದೋಷಗಳು ಹಾಗೂ ಅದರ ಆಚರಣೆಯಲ್ಲಿನ ತೊಡಕುಗಳಿಂದ ಪುಸ್ತಕ ಪೈರೆಸಿ ದಿನೇದಿನೇ ಬೆಳೆಯುತ್ತಿದೆ. ಇದರ ಜೊತೆಗೆ ಮಾಹಿತಿ ತಂತ್ರಜ್ಞಾನದ ದುರುಪಯೋಗವೂ ಪುಸ್ತಕ ಪೈರೆಸಿಯ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿದೆ. ಮಾಹಿತಿ ತಂತ್ರಜ್ಞಾನ ಅನೇಕ ರೀತಿಯಲ್ಲಿ ಪುಸ್ತಕ ಮುದ್ರಣ ಮತ್ತು ಪ್ರಸರಣಕ್ಕೆ ಪೂರಕವಾಗಿದ್ದರೂ ಅದು ಪುಸ್ತಕ ನಕಲುಮಾಡುವುದನ್ನು ಸುಲಭಗೊಳಿಸಿದೆ. ಅತಿ ವೇಗವಾಗಿ ಸಾವಿರಾರು ಪ್ರತಿಗಳನ್ನು ಅಚ್ಚುಹಾಕಲು ಮತ್ತು ಇಂಟರ್‌ನೆಟ್ ಮೂಲಕ ಕ್ಷಣಮಾತ್ರದಲ್ಲಿ ಪುಸ್ತಕವನ್ನು ವರ್ಗಾಯಿಸುವುದು ಸಾಧ್ಯವಾಗಿರುವುದೆ ಮಾಹಿತಿ ತಂತ್ರಜ್ಞಾನದಿಂದ. ಅದರೆ ಇದೇ ತಂತ್ರಜ್ಞಾನವನ್ನು ಪುಸ್ತಕಗಳ ನಕಲಿ ಪ್ರತಿಗಳನ್ನು ಮಾಡಲು ಸಮರ್ಥವಾಗಿ ಬಳಸಿಕೊಳ್ಳಲಾಗುತ್ತಿದೆ. ಮೂಲಪ್ರತಿಗೂ ಮತ್ತು ನಕಲಿಪ್ರತಿಗೂ ಯಾವುದೇ ವ್ಯತ್ಯಾಸವಿಲ್ಲದಂತೆ ಮುದ್ರಿಸಲಾಗುತ್ತಿದೆ. ಖೋಟಾ ಕರೆನ್ಸಿ ನೋಟುಗಳನ್ನೇ ಮುದ್ರಿಸುವವರಿಗೆ ಪುಸ್ತಕ ಮುದ್ರಿಸುವುದು ಕಷ್ಟದ ಕೆಲಸವಲ್ಲ. ಸಿನಿಮಾ, ಸಂಗೀತ ಮತ್ತು ಕಂಪ್ಯೂಟರ್ ಸಾಫ್ಟವೇರ್ (ತಂತ್ರಾಂಶ) ಉದ್ಯಮಗಳು ಈ ಪೈರೆಸಿ ಪಿಡುಗಿನಿಂದ ತತ್ತರಿಸುತ್ತಿವೆ. ಕೇವಲ ಹತ್ತು ರೂಪಾಯಿಗೆ ಆರು ಸಿನಿಮಾ ಇರುವ ಸಿಡಿ ದೊರೆಯುವಾಗ ಯಾರು ತಾನೆ ಸಿನಿಮಾ ಮಂದಿರಕ್ಕೆ ಕಾಲಿಡುತ್ತಾರೆ? ಮತ್ತೊಬ್ಬರ ಕೃತಿಯನ್ನ ತಮ್ಮ ಹೆಸರಿನಲ್ಲಿ ಪ್ರಕಟಿಸುವುದು ಮತ್ತೊಂದು ರೀತಿಯ ಕಳ್ಳತನ ಎಂಬುದು ತಿಳಿದಿದ್ದರೂ ಅನೇಕರು ಈ ಕೆಲಸದಲ್ಲಿ ನಿರತರಾಗಿದ್ದಾರೆ. ನಕಲಿ ಪುಸ್ತಕಗಳು ಮಾತ್ರವಲ್ಲ ಮತ್ತೊಬ್ಬರ ಕೃತಿಗೆ ಮಸಾಲೆ ಸೇರಿಸಿ ಅಲ್ಪಸ್ವಲ್ಪ ಕಲಬೆರಕೆ ಮಾಡಿ ತಮ್ಮ ಹೆಸರಿನಲ್ಲಿ ಪ್ರಕಟಿಸುವ ಅನೇಕ ಮಂದಿ 'ಲೇಖಕರು' ನಮ್ಮಲ್ಲಿದ್ದಾರೆ. ಒಂದು ಭಾಷೆಯಲ್ಲಿ ಪ್ರಕಟವಾದ ಲೇಖನ, ಕಥೆ, ನಾಟಕ ಇತ್ಯಾದಿ ಸಾಹಿತ್ಯವನ್ನು ಮೂಲ ಲೇಖಕರ ಅಥವಾ ಪ್ರಕಾಶಕರ ಅಪ್ಪಣೆ ಇಲ್ಲದೆ ಕನ್ನಡಕ್ಕೆ ಭಟ್ಟಿ ಇಳಿಸಿ ತಮ್ಮ ಹೆಸರಿನಲ್ಲಿ ಪ್ರಕಟಿಸುವ ಅಂಕಣಕಾರರೂ ಇದ್ದಾರೆ. ಇತ್ತೀಚಿನ ದಿನಗಳಲ್ಲಿ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗುವ ಕೆಲವು ಲೇಖನಗಳನ್ನು ಓದುತ್ತಿದ್ದರೆ ಹಿಂದಿನ ವಾರವಷ್ಟೇ ಇಂಗ್ಲಿಷ್



ಪತ್ರಿಕೆಯನ್ನು ಓದಿದ ಅನುಭವವಾಗುತ್ತದೆ. ಹೀಗೆ ಮತ್ತೊಬ್ಬರ ಸ್ವತ್ತನ್ನು ತಮ್ಮದೆಂದು ಹೇಳಿಕೊಳ್ಳುವುದು ನ್ಯಾಯಬಾಹಿರವೂ ಹೌದು, ಅನೈತಿಕವೂ ಹೌದು. ಇದೊಂದು ರೀತಿಯ ಆರ್ಥಿಕ ಅಪರಾಧ.

ಪುಸ್ತಕ ಪೈರೆಸಿ ಅತ್ಯಂತ ಗೌಪ್ಯವಾಗಿ ನಡೆಯುತ್ತಿರುವುದರಿಂದ ಅದರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಪುಸ್ತಕೋದ್ಯಮದ ಬಗ್ಗೆಯೇ ಸರಿಯಾದ ಮಾಹಿತಿ ಇಲ್ಲದಿರುವಾಗ ಇನ್ನು ಅದರ ನಕಲಿ ಮಾರುಕಟ್ಟೆ ಬಗ್ಗೆ ಹೇಗೆ ಹೇಳುವುದು. ಆದರೂ ಕೆಲವೊಂದು ವರದಿಗಳ ಆಧಾರದ ಮೇಲೆ ಪುಸ್ತಕ ಪೈರೆಸಿಯ ಗಂಭೀರತೆಯನ್ನು ಮನಗಾಣಬಹುದು. ಭಾರತೀಯ ಪ್ರಕಾಶಕರ ಒಕ್ಕೂಟ ಕಲೆಹಾಕಿರುವ ಮಾಹಿತಿ ಪ್ರಕಾರ ದೇಶದಲ್ಲಿರುವ ಸುಮಾರು 11000 ಪ್ರಕಾಶಕರು ಸುಮಾರು 60000 ಪುಸ್ತಕಗಳನ್ನು (ಟೈಟಲ್) ಪ್ರಕಟಿಸುತ್ತಿದ್ದಾರೆ. ಪುಸ್ತಕೋದ್ಯಮ ಬೆಳವಣಿಗೆ ವರ್ಷಕ್ಕೆ ಶೇಕಡ 12.6. ಮತ್ತೊಂದು ವರದಿಯ ಪ್ರಕಾರ ದೇಶದಲ್ಲಿ ಸುಮಾರು 13000 ಪ್ರಕಾಶಕರು ವರ್ಷಕ್ಕೆ 50000 ಪುಸ್ತಕಗಳು ಹಾಗೂ 13000 ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದಾರೆ. ಇದರಲ್ಲಿ ಶಾಲಾಕಾಲೇಜುಗಳ ಪಠ್ಯಪುಸ್ತಕಗಳು ಸೇರಿಲ್ಲ. ಇಂಗ್ಲಿಷ್ ಪುಸ್ತಕಗಳ ಪ್ರಕಟನೆಯಲ್ಲಿ ಭಾರತಕ್ಕೆ ಮೂರನೆಯ ಸ್ಥಾನ. ಮೊದಲೆರಡು ಸ್ಥಾನಗಳನ್ನು ಕ್ರಮವಾಗಿ ಅಮೇರಿಕಾ ಮತ್ತು ಬ್ರಿಟನ್ ಆಕ್ರಮಿಸಿಕೊಂಡಿದೆ. ಕೇಂದ್ರ ಸರ್ಕಾರದ ವಾಣಿಜ್ಯ ಇಲಾಖೆಯು ಕ್ಯಾಪೆಕ್ಸಿಲ್ (Capexil) ಎಂಬ ರಫ್ತು ಉತ್ತೇಜನಾ ಕೋಶವನ್ನು ಸ್ಥಾಪಿಸಿದೆ. ಈ ಸಂಸ್ಥೆಯ ವರದಿಯ ಪ್ರಕಾರ ಭಾರತವು 2008–09ರಲ್ಲಿ ರೂ. 1057 ಕೋಟಿ ಮೊತ್ತದ ಪುಸ್ತಕವನ್ನು ರಫ್ತು ಮಾಡಿದೆ. 2006–07ರಲ್ಲಿ ರಫ್ತು ಮಾಡಿದ ಪುಸ್ತಕದ ಮೊತ್ತ ರೂ.1125 ಕೋಟಿ. ಎಂಬತ್ತರ ದಶಕದಲ್ಲಿ ಈ ಮೊತ್ತ ಕೇವಲ ರೂ. 807 ಕೋಟಿ ಇದ್ದಿತು. ಇತ್ತೀಚೆಗೆ ಆನ್‌ಲೈನ್ ಮಾರಾಟ ತ್ವರಿತ ಗತಿಯಲ್ಲಿ ಬೆಳೆಯುತ್ತಿದೆ. ಪ್ರತಿದಿನ ಸುಮಾರು 10000 ಪುಸ್ತಕಗಳು ಆನ್‌ಲೈನ್ ಮೂಲಕ ಮಾರಾಟವಾಗುತ್ತಿದೆ. ಆನ್‌ಲೈನ್ ವ್ಯಾಪಾರದ ಮೊತ್ತ ಸುಮಾರು ರೂ.70 ಕೋಟಿ.

ಅನೇಕ ಸಮಸ್ಯೆಗಳ ನಡುವೆಯೂ ಭಾರತದ ಪುಸ್ತಕೋದ್ಯಮ ಬೆಳೆಯುತ್ತಿದೆ. ಆದರೆ ಈ ಎಲ್ಲ ಬೆಳವಣಿಗೆಯನ್ನು ಪೈರೆಸಿ ತಿಂದುಹಾಕುತ್ತಿದೆ. ಒಂದು ಸಮೀಕ್ಷೆಯ ಪ್ರಕಾರ ಶೇಕಡ 25 ಪುಸ್ತಕಗಳು ನಕಲಿ. ಅಂದರೆ ಪುಸ್ತಕೋದ್ಯಮದ ಶೇಕಡ 25 ಪಾಲು ಪೈರೆಸಿಯಲ್ಲಿ ನಿರತರಾಗಿರುವವರ ಕೈಸೇರುತ್ತಿದೆ. ಮಾನವ ಸಂಪನ್ಮೂಲ ಇಲಾಖೆಯ ಪ್ರಕಾರ ಪುಸ್ತಕ ಪೈರೆಸಿ ಮೂರು ವಿಧಗಳಲ್ಲಿ ನಡೆಯುತ್ತದೆ. ಒಂದು ಪುಸ್ತಕವನ್ನು ಲೇಖಕರು ಮತ್ತು ಪ್ರಕಾಶಕರ ಅನುಮತಿ ಇಲ್ಲದೆ ಪ್ರಕಟಿಸುವುದು ಮೊದಲನೆಯ ಮಾದರಿ ಪೈರೆಸಿ. ಪ್ರಸಿದ್ಧ ಲೇಖಕರ ಹೆಸರಿನಲ್ಲಿ ಇನ್ಯಾರೋ ಬರೆದ ಪುಸ್ತಕಗಳನ್ನು ಪ್ರಕಟಿಸುವುದು ಎರಡನೆಯ ಮಾದರಿ. ವಿದೇಶಿ ಭಾಷೆಯಲ್ಲಿರುವ ಪುಸ್ತಕಗಳನ್ನು ಭಾಷಾಂತರ ಮಾಡಿ ಮಾರಾಟ ಮಾಡುವುದು ಮೂರನೆಯ ಮಾದರಿ ಪೈರೆಸಿ. ಇತ್ತೀಚಿನ ವರ್ಷಗಳಲ್ಲಿ ಇಡೀ ಪುಸ್ತಕ ಇಲ್ಲವೆ ಕೆಲವೊಂದು ಭಾಗಗಳನ್ನು ನೆರಳಚ್ಚು (ರಿಪ್ರೋಗ್ರಾಫಿ) ಮಾಡಿಸಿ ಅದನ್ನು ಬೈಂಡ್ ಮಾಡಿ ಮಾರಾಟ ಮಾಡುವುದು ಹೆಚ್ಚಾಗುತ್ತಿದೆ. ಕಾಲೇಜಿನ ವಿದ್ಯಾರ್ಥಿಗಳು ನೋಟ್ಸ್ ಬರೆಯುವುದನ್ನು ಮರೆತಿದ್ದಾರೆ.ಬದಲಾಗಿ ಈ ಪುಸ್ತಕಗಳ ಮೊರೆಹೋಗಿದ್ದಾರೆ. ಇದೂ ಒಂದು ರೀತಿಯ ಪೈರೆಸಿಯಾಗಿದ್ದು, ಕಾನೂನು ಪ್ರಕಾರ ಶಿಕ್ಷೆಗೆ ಗುರಿಪಡಿಸಬಹುದು.

ಪೈರೆಸಿಯನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರ ಅನೇಕ ರೀತಿ ಕ್ರಮ ಕೈಗೊಂಡಿದೆ. ಇದಕ್ಕೆ ಪುಸ್ತಕೋದ್ಯಮವೂ ಸೇರಿದಂತೆ ಇತರೆ ಉದ್ಯಮವೂ ತನ್ನ ಸಹಕಾರ ನೀಡಿದೆ. ಆ ಪ್ರಯತ್ನಗಳಲ್ಲಿ ಕಾಪಿರೈಟ್ ಕಾನೂನಿನ ಅನುಷ್ಠಾನವೂ ಒಂದು. ಲೇಖಕರ ಮತ್ತು ಪ್ರಕಾಶಕರ ದೃಷ್ಟಿಯಿಂದ ಕೃತಿಸ್ವಾಮ್ಯ ಬಹಳ ಮಹತ್ವದ್ದು. ಕಾರಣ ಕಾಪಿರೈಟ್ ಒಬ್ಬ ಲೇಖಕನ ಸೃಜನಶೀಲತೆಗೆ ಉತ್ತೇಜನ ನೀಡುತ್ತದೆ. ತಾನು ಸೃಷ್ಟಿಸಿದ ಕೃತಿಯನ್ನಾಗಲಿ ಅಥವಾ ಅದರಲ್ಲಿರುವ ಮುಖ್ಯಾಂಶಗಳನ್ನಾಗಲಿ ಮತ್ತೊಬ್ಬರು ತಮ್ಮದೆಂದು ಬಳಸಿಕೊಳ್ಳುವುದನ್ನು ಕಾಪಿರೈಟ್ ತಡೆಗಟ್ಟುತ್ತದೆ. ಸಾಹಿತ್ಯ ರಚನಕಾರರು, ಸಂಗೀತಗಾರರು, ನಾಟಕಕಾರರು, ಸಿನೆಮಾ ಮತ್ತು ಧ್ವನಿಮುದ್ರಣದವರಿಗೆ ನೀಡಿರುವ ವಿಶೇಷವಾದ ಹಕ್ಕನ್ನು ಕಾಪಿರೈಟ್ ಅಥವ ಕೃತಿಸ್ವಾಮ್ಯ ಎಂದು ಕರೆಯಲಾಗಿದೆ. ಕಾಪಿರೈಟ್ ಹಕ್ಕು ನೀಡುವ ಹಿಂದಿರುವ ಉದ್ದೇಶ ಮುಖ್ಯವಾಗಿ ಎರಡು. ಕೃತಿಕಾರರು ಸೃಷ್ಟಿಸುವ ಕೃತಿಯ ಮೇಲೆ ಅಧಿಕಾರ ನೀಡುವುದು ಹಾಗೂ ಮತ್ತೊಬ್ಬರು ಆ ಅಧಿಕಾರದ ದುರುಪಯೋಗವನ್ನು ತಡೆಗಟ್ಟುವುದು ಅಥವಾ ಆ ರೀತಿಯ ದುರುಪಯೋಗಮಾಡಿಕೊಂಡವರ ವಿರುದ್ಧ ಕಾನೂನಿನ ಕ್ರಮಕೈಗೊಳ್ಳುವುದು. ಕಾಪಿರೈಟ್ ಕೇವಲ ಒಂದು ರೀತಿಯ ಹಕ್ಕಲ್ಲ. ಅದು ನಾಲ್ಕಾರು ಹಕ್ಕುಗಳ ಸಮ್ಮಿಲನ. ಆದ್ದರಿಂದಲೇ ಕಾಪಿರೈಟ್‌ಅನ್ನು ಹಕ್ಕುಗಳ ಕಂತೆ ಎಂದೇ ಹೇಳಲಾಗಿದೆ. ಉದಾಹರಣೆಗೆ, ಒಂದು ಸಾಹಿತ್ಯ ಕೃತಿಯ ಪುನರ್‌ಮುದ್ರಣ, ಅದನ್ನು ಆಧರಿಸಿ ನಾಟಕ ರಚನೆ, ಮತ್ತೊಂದು ಭಾಷೆಗೆ ತರ್ಜುಮೆ, ಕೃತಿಯನ್ನು ಆಧರಿಸಿ ಸಿನಿಮಾ ತಯಾರಿಕೆ ಇತ್ಯಾದಿ ಎಲ್ಲವೂ ಕಾಪಿರೈಟ್‌ನಲ್ಲಿ ಅಡಗಿದೆ. ಕಾಪಿರೈಟ್‌ನ ಮತ್ತೊಂದು ಉದ್ದೇಶವೆಂದರೆ ಒಂದು ಕೃತಿಯಿಂದ ಇಡೀ ಸಮುದಾಯ ಲಾಭ ಪಡೆಯಬೇಕು. ಉದಾಹರಣೆಗೆ, ಉತ್ತಮ ಕಥೆ, ಕಾದಂಬರಿ, ವೈಜ್ಞಾನಿಕ ಕೃತಿಯಲ್ಲಿರುವ ಮಾಹಿತಿ ಸಮಾಜದ ಒಳಿತಿಗಾಗಿ ಬಳಕೆಯಾಗಬೇಕು. ಆದನ್ನು ರಚಿಸಿದವರು ಮಾತ್ರ

ಅದನ್ನು ತಮ್ಮ ಬಳಿ ಇಟ್ಟುಕೊಳ್ಳಬಾರದು. ಆದರೆ ಅದೇ ಸಮಯದಲ್ಲಿ ಕೃತಿ ರಚಿಸಿದವರಿಗೆ ಸೂಕ್ತ ಆರ್ಥಿಕ ಲಾಭವೂ ದೊರೆಯಬೇಕು. ಈ ಎರಡೂ ಉದ್ದೇಶಗಳನ್ನು ಸಮೀಕರಿಸುವ ಸಾಧನವೇ ಕಾಪಿರೈಟ್ ಕಾನೂನು.

ಭಾರತದಲ್ಲಿ ಕೃತಿಸ್ವಾಮ್ಯ ಕಾನೂನಿಗೆ ತನ್ನದೇ ಆದ ಇತಿಹಾಸವಿದ್ದರೂ ಅದಕ್ಕೊಂದು ಸ್ಪಷ್ಟರೂಪ ದೊರೆತದ್ದು ಐವತ್ತರ ದಶಕದಲ್ಲಿ. ಕೇಂದ್ರ ಸರ್ಕಾರವು 1957ರಲ್ಲಿ ಕಾಪಿರೈಟ್ ಕಾನೂನನ್ನು ಜಾರಿಗೊಳಿಸಿತು. ಅಂದಿನಿಂದ ಕಾಪಿರೈಟ್ ಕಾನೂನಿಗೆ ಕೆಲವು ಬಾರಿ ತಿದ್ದುಪಡಿಮಾಡಲಾಗಿದೆ. ಇತ್ತೀಚೆಗೆ ಇಡೀ ಕಾನೂನನ್ನು ಸಮಗ್ರವಾಗಿ ಮಾರ್ಪಡಿಸುವ ಪ್ರಯತ್ನ ನಡೆದಿದ್ದು ಕಾಪಿರೈಟ್ ಕಾನೂನು 2010ರ ಕರಡು ವಿಧೇಯಕ ಸಿದ್ಧವಾಗಿದೆ. ಕಾಪಿರೈಟ್ ಕಾನೂನು ಮೂಲ ಕೃತಿಯನ್ನು ರಕ್ಷಿಸುತ್ತದೆಯಾದರೂ ಕೆಲವೊಂದು ಸಾಧಾರಣ ಹೆಸರು, ಸ್ಲೋಗನ್, ವ್ಯಕ್ತಿಗಳ ಹೆಸರಿನ ಹಿಂದೆ ಬಳಸುವ ಟೈಟಲ್ ಇತ್ಯಾದಿಯನ್ನು ರಕ್ಷಿಸುವುದಿಲ್ಲ. ಆರಂಭದಲ್ಲಿ ಕಾಪಿರೈಟ್ ಕಾನೂನು ಮೂಲ ಸಾಹಿತ್ಯಕೃತಿ, ನಾಟಕ, ಸಂಗೀತ, ಕಲೆ, ಸಿನಿಮಾ ಮತ್ತು ಶಬ್ದಗ್ರಹಣಕ್ಕೆ ಮಾತ್ರ ರಕ್ಷಣೆ ನೀಡುತ್ತಿತ್ತು. ಆದರೆ ಈಗ ಕಂಪ್ಯೂಟರ್ ತಂತ್ರಾಂಶ ಹಾಗೂ ಇತರೆ ಬೌದ್ಧಿಕ ಆಸ್ತಿಹಕ್ಕುಗಳನ್ನು ಸಹ ರಕ್ಷಿಸುತ್ತದೆ. ಈ ಕೃತಿಗಳನ್ನು ಸೃಷ್ಟಿಸಿದವರನ್ನು 'ಆಥರ್' ಎಂದು ಕರೆಯಲಾಗಿದೆ. ಉದಾಹರಣೆಗೆ, ಸಾಹಿತ್ಯ ಕೃತಿಯ ರಚನಕಾರರು, ಸಂಗೀತದ ಕಂಪೋಸರ್, ಸಿನಿಮಾ ನಿರ್ಮಾಪಕ ಮತ್ತು ಕಂಪ್ಯೂಟರ್ ಪ್ರೋಗ್ರಾಮ್ ರಚಿಸಿದವರು ಆಥರ್ ಆಗುತ್ತಾರೆ.

ಕಾಪಿರೈಟ್ ಕಾನೂನಿನ ವಿಶೇಷ ಏನೆಂದರೆ ಒಂದು ಕೃತಿಯನ್ನು ಕಾಪಿರೈಟ್ ಕಾನೂನು ಪ್ರಕಾರ ನೊಂದಾಯಿಸದಿದ್ದರೂ ಅದನ್ನು ರಚಿಸಿದವರಿಗೆ ರಕ್ಷಣೆ ದೊರೆಯುತ್ತದೆ. ಒಂದು ಕೃತಿಯನ್ನು ರಚಿಸಿದ ಕೂಡಲೇ ಅದಕ್ಕೆ ಕಾಪಿರೈಟ್ ದೊರೆಯುತ್ತದೆ. ಈ ಕೃತಿಯನ್ನು ನೊಂದಾಯಿಸಲೇಬೇಕೆಂಬ ನಿಯಮವಿಲ್ಲ. ಆದರೆ ಕೃತಿಸ್ವಾಮ್ಯವನ್ನು ನೊಂದಾಯಿಸುವುದರಿಂದ ಅನುಕೂಲಗಳಿವೆ. ಉದಾಹರಣೆಗೆ, ಮುಂದೆ ಎಂದಾದರೂ ಕೃತಿಸ್ವಾಮ್ಯ ಉಲ್ಲಂಘಿಸಿದರೆ ಅವರ ವಿರುದ್ಧ ದೂರು ಸಲ್ಲಿಸುವುದಕ್ಕೆ ಅಥವಾ ಮೂಲ ಕೃತಿ ತಮ್ಮದೇ ಎಂದು ಸಾಬೀತುಪಡಿಸುವುದು ಸುಲಭವಾಗುತ್ತದೆ. ಕಾಪಿರೈಟ್ ನೊಂದಾಯಿಸಲು ಕೃತಿಕಾರರು ಕೆಲವೊಂದು ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ನಿಗದಿದ ಶುಲ್ಕದೊಂದಿಗೆ ರಿಜಿಸ್ಟ್ರಾರ್ ಆಫ್ ಕಾಪಿರೈಟ್ಸ್ ಅವರಲ್ಲಿ ಸಲ್ಲಿಸಬೇಕು. ಇತ್ತೀಚೆಗೆ 'ಈ ಫೈಲಿಂಗ್' ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಪ್ರತಿಯೊಂದು ಕೃತಿಗೂ ಪ್ರತ್ಯೇಕ ಅರ್ಜಿ ಸಲ್ಲಿಸಬೇಕು. ಕೃತಿಕಾರರು ಅಥವಾ ಕೃತಿಸ್ವಾಮ್ಯ ಹೊಂದಿರುವವರು ಅಥವಾ ಮೂಲ ಕೃತಿಕಾರನ ವಾರಸುದಾರರು ಅರ್ಜಿ ಸಲ್ಲಿಸಬಹುದು.

ಕಾಪಿರೈಟ್ ಕಾನೂನು ಜಾರಿಗೆ ಬಂದದ್ದು 1958ನೇ ಜನವರಿ 21ರಂದು. ಈ ದಿನಾಂಕದ ಮೊದಲು ಪ್ರಕಟವಾದ ಕೃತಿಗಳನ್ನು ಸಹ ನೊಂದಾಯಿಸುವ ಅವಕಾಶವಿದೆ. ಪ್ರಕಟಿತ ಕೃತಿಗಳನ್ನು ಮಾತ್ರವಲ್ಲದೆ ಅಪ್ರಕಟಿತ ಕೃತಿಗಳನ್ನು ಸಹ ಕಾಪಿರೈಟ್ ಕಾಯ್ದೆಯ ಅಡಿಯಲ್ಲಿ ನೊಂದಾಯಿಸಬಹುದು. ಆದರೆ ಆ ಅಪ್ರಕಟಿತ ಕೃತಿ ಕಾಪಿರೈಟ್‌ಗೆ ಅರ್ಹತೆ ಹೊಂದಿರಬೇಕು. ಅಪ್ರಕಟಿತ ಕೃತಿ ನೊಂದಾಯಿಸಬೇಕಾದರೆ, ಆ ಕೃತಿಯ ಎರಡು ಪ್ರತಿಗಳನ್ನು ರಿಜಿಸ್ಟ್ರಾರ್ ಆಫ್ ಕಾಪಿರೈಟ್ಸ್ ಕಚೇರಿಗೆ ಸಲ್ಲಿಸಬೇಕು. ರಿಜಿಸ್ಟ್ರಾರ್ ಅವರು ಒಂದನ್ನು ತಮ್ಮ ಬಳಿ ಇರಿಸಿಕೊಂಡು ಮತ್ತೊಂದು ಪ್ರತಿಯ ಮೇಲೆ ಮುದ್ರಾಂಕಿತ ಹಾಕಿ ಕೃತಿಕಾರರಿಗೆ ಹಿಂತಿರುಗಿಸುತ್ತಾರೆ. ಅಪ್ರಕಟಿತ ಕೃತಿಯನ್ನು ಗೌಪ್ಯವಾಗಿರಿಸಲಾಗುತ್ತದೆ. ಒಮ್ಮೆ ಅಪ್ರಕಟಿತ ಎಂದು ನೊಂದಾಯಿಸಿದ ಮೇಲೆ ಅದನ್ನು ಪ್ರಕಟಿಸಿದರೆ ಈ ಬದಲಾವಣೆ ಬಗ್ಗೆ ಕಾಪಿರೈಟ್ ಕಚೇರಿಗೆ ಅರ್ಜಿ ಸಲ್ಲಿಸಿ ಮಾಹಿತಿ ನೀಡಬೇಕು. ಇದಕ್ಕೆ ಪ್ರತ್ಯೇಕ ನಮೂನೆ ಇದೆ.

ಒಂದು ಕೃತಿಯನ್ನು ನೊಂದಾಯಿಸಲು ಸುಮಾರು 2ರಿಂದ 3 ತಿಂಗಳು ಬೇಕಾಗುತ್ತದೆ. ಅರ್ಜಿ ಸಲ್ಲಿಸಿದ ನಂತರ ಕಾಪಿರೈಟ್ ಕಚೇರಿಯು ಅರ್ಜಿದಾರರಿಗೆ ಒಂದು ಕ್ರಮಸಂಖ್ಯೆಯನ್ನು ನೀಡುತ್ತದೆ. ಕಾಪಿರೈಟ್ ನೀಡಲು ಇತರರಿಂದ ಯಾವುದೆ ರೀತಿಯ ವಿರೋಧ ವ್ಯಕ್ತವಾದಲ್ಲಿ ಅದನ್ನು ಪರಿಹರಿಸಲು ಪ್ರಯತ್ನಿಸುತ್ತದೆ. ಮೂಲ ಕೃತಿ ಯಾರದ್ದು ಎಂಬುದನ್ನು ನಿರ್ಧರಿಸಲು ಒಂದು ತಿಂಗಳ ಕಾಲಾವಕಾಶ ನೀಡಲಾಗಿದೆ. ಎರಡೂ ಕಡೆಯವರಿಗೆ ತಮ್ಮ ಅಭಿಪ್ರಾಯ ಮಂಡಿಸಲು ಅವಕಾಶ ನೀಡಲಾಗುತ್ತದೆ. ಯಾವುದೇ ವಿರೋಧ ವ್ಯಕ್ತವಾಗದಿದ್ದಲ್ಲಿ ಕೃತಿಯನ್ನು ಪರಿಶೀಲಿಸಿ ಕೃತಿಸ್ವಾಮ್ಯ ನೊಂದಾಯಿಸಲಾಗುತ್ತದೆ. ಕೃತಿಸ್ವಾಮ್ಯದ ವಾಯ್ದೆ ಮೂಲ ಕೃತಿ ಪ್ರಕಟವಾದಾಗಿನಿಂದ ಇಂತಿಷ್ಟು ವರ್ಷವೆಂದು ನಿಗದಿಪಡಿಸಲಾಗಿದೆ. ಈ ವಾಯ್ದೆ ಇಡೀ ವಿಶ್ವಕ್ಕೆ ಒಂದೇ ರೀತಿ ಇರದೆ ಭಿನ್ನವಾಗಿದೆ. ಉದಾಹರಣೆಗೆ ಭಾರತದಲ್ಲಿ ಕೃತಿಸ್ವಾಮ್ಯದ ವಾಯ್ದೆ 60 ವರ್ಷವಿದ್ದರೆ, ಬ್ರಿಟನ್‌ನಲ್ಲಿ 50 ವರ್ಷ ಮತ್ತು ಅಮೇರಿಕದಲ್ಲಿ 95 ವರ್ಷ. ಸಾಹಿತ್ಯ ಕೃತಿಗಳ ಕೃತಿಕಾರನ ನಿಧನದ ನಂತರ 60 ವರ್ಷ ಕಾಪಿರೈಟ್ ಚಾಲ್ತಿಯಲ್ಲಿರುತ್ತದೆ. ಸಿನಿಮಾ, ಶಬ್ದಗ್ರಹಣ,

ಛಾಯಾಚಿತ್ರ ಹಾಗೂ ಮರಣೋತ್ತರ ಪ್ರಕಟಣೆಗಳಿಗೆ ಕೃತಿ ಪ್ರಕಟವಾದ ದಿನದಿಂದ 60 ವರ್ಷ ಕಾಪಿರೈಟ್ ಅನ್ವಯಿಸುತ್ತದೆ.

ಕೃತಿಯು ಪ್ರಥಮವಾಗಿ ಪ್ರಕಟವಾದ ದಿನಾಂಕ ಅಥವಾ ವರ್ಷವನ್ನು ಆಧರಿಸಿ ಕಾಪಿರೈಟ್ ನೀಡುವುದರಿಂದ ಕಾಪಿರೈಟ್ ಕಾನೂನಿನಲ್ಲಿ [ಸೆಕ್ಷನ್ 13 (2)] ಇದಕ್ಕೆ ಸಂಬಂಧಿಸಿದ ಅಂಶಗಳನ್ನು ಗಮನಿಸಬೇಕು. ಕಾಪಿರೈಟ್ ಯಾವ ಕೃತಿಯಲ್ಲಿರುತ್ತದೆ ಎಂಬುದನ್ನು ಈ ಸೆಕ್ಷನ್ ಹೇಳುತ್ತದೆ. ಅದರ ಪ್ರಕಾರ ಭಾರತದಲ್ಲಿ ಪ್ರಕಟವಾದ ಕೃತಿಯಾದರೆ ಅದು ಪ್ರಥಮಬಾರಿ ಭಾರತದಲ್ಲಿ ಪ್ರಕಟವಾಗಿರಬೇಕು. ಇತರೆ ದೇಶದಲ್ಲಿ ಪ್ರಥಮಭಾರಿ ಪ್ರಕಟವಾಗಿದ್ದರೆ ಅದರ ಕೃತಿಕಾರ ಪ್ರಕಟವಾಗುವ ಸಂದರ್ಭದಲ್ಲಿ ಭಾರತೀಯ ಪ್ರಜೆಯಾಗಿದ್ದು ಕೃತಿ ವಿದೇಶದಲ್ಲಿ ಪ್ರಕಟವಾಗುವ ಮುನ್ನ ನಿಧನಹೊಂದಿರಬೇಕು. ಅಪ್ರಕಟಿತ ಕೃತಿಯಾದರೆ ಕೃತಿಕಾರನು ಕೃತಿಯನ್ನು ರಚಿಸುವ ಸಂದರ್ಭದಲ್ಲಿ ಭಾರತೀಯ ಪ್ರಜೆಯಾಗಿರಬೇಕು ಅಥವಾ ಭಾರತ ವಾಸಸ್ಥಾನ (ಡಾಮಿಸೈಲ್) ವಾಗಿರಬೇಕು.

ಕಾಪಿರೈಟ್ ಎರಡು ಪ್ರಮುಖ ಹಕ್ಕುಗಳನ್ನು ಹೊಂದಿದೆ. ಅವುಗಳೆಂದರೆ ಆರ್ಥಿಕ ಹಕ್ಕು ಮತ್ತು ನೈತಿಕ ಹಕ್ಕು. ಕೃತಿಯನ್ನು ಸೃಷ್ಟಿಸಿದವರು ಆರಂಭದಲ್ಲಿ ಕೃತಿಸ್ವಾಮ್ಯ ಹೊಂದಿರುತ್ತಾರೆ. ಆನಂತರ ಆ ಹಕ್ಕನ್ನು ಮತ್ತೊಬ್ಬರಿಗೆ ಹಸ್ತಾಂತರಿಸಬಹುದು ಅಥವಾ ಮಾರಾಟಮಾಡಬಹುದು. ಆರ್ಥಿಕ ಹಕ್ಕು ಕೃತಿಕಾರನ ಆರ್ಥಿಕ ವರಮಾನಕ್ಕೆ ಸಂಬಂಧಿಸಿದ್ದು. ಆದಕಾರಣ, ಕೃತಿಕಾರರು ಕೃತಿಸ್ವಾಮ್ಯವನ್ನು ನಾನಾ ರೀತಿಯಲ್ಲಿ ಆರ್ಥಿಕ ಲಾಭಕ್ಕೆ ಬಳಸಿಕೊಳ್ಳಬಹುದು. ಉದಾಹರಣೆಗೆ, ಕೃತಿಯ ಮರುಮುದ್ರಣಕ್ಕೆ, ಹಾಗೂ ಅನುವಾದಕ್ಕೆ ಒಪ್ಪಿಗೆ ಸೂಚಿಸುವುದು, ಅದನ್ನು ಆಧರಿಸಿ ಮತ್ತೊಂದು ಮಾದರಿಯಲ್ಲಿ ವ್ಯಕ್ತಗೊಳಿಸಲು ಅನುಮತಿ ನೀಡುವುದು ಅಥವಾ ಮತ್ತೊಬ್ಬರಿಗೆ ಪರವಾನಗಿ ನೀಡುವುದು ಇತ್ಯಾದಿ ಆರ್ಥಿಕ ಹಕ್ಕುಗಳಲ್ಲಿ ಸೇರಿದೆ. ಕೃತಿಸ್ವಾಮ್ಯದ ಮೂಲಕ ಹಣಗಳಿಸಬೇಕಾದರೆ ಕೃತಿ ಮಾರುಕಟ್ಟೆಯನ್ನು ಪ್ರವೇಶಿಸಬೇಕು. ಕೃತಿಯ ಅನೇಕ ಪ್ರತಿಗಳು ಹೆಚ್ಚು ಹೆಚ್ಚು ಜನರನ್ನು ತಲಪಬೇಕು. ಕೃತಿ ವ್ಯಾಪಕವಾಗಿ ಹರಡಿದಷ್ಟೂ ಕೃತಿಕಾರನಿಗೆ ಆರ್ಥಿಕ ಲಾಭ ಹೆಚ್ಚುತ್ತದೆ. ಕೇವಲ ಒಂದು ಕೃತಿಯನ್ನು ಪ್ರಕಟಿಸಿದರೆ ಸಾಲದು ಅದರ ಬಗ್ಗೆ ಸಾರ್ವಜನಿಕರಿಂದ ಮೆಚ್ಚುಗೆ ವ್ಯಕ್ತವಾಗಬೇಕು. ಮಾರುಕಟ್ಟೆಯ ನಿರೀಕ್ಷೆಗೆ ತಕ್ಕಂತೆ ಕೃತಿ ಇದ್ದಲ್ಲಿ ಕೃತಿಸ್ವಾಮ್ಯದ ಆರ್ಥಿಕ ಮೌಲ್ಯ ಹೆಚ್ಚುತ್ತದೆ.

ಕೃತಿಸ್ವಾಮ್ಯದ ಮತ್ತೊಂದು ಮುಖ ನೈತಿಕ ಹಕ್ಕು. ಇದು ಕೃತಿಕಾರನ ಆರ್ಥಿಕ ಹಕ್ಕಿಗಿಂತ ಭಿನ್ನವಾದದ್ದು. ಸೃಜನಶೀಲ ವ್ಯಕ್ತಿ ತಾನು ಸೃಷ್ಟಿಸಿದ ಕೃತಿಯ ಮೇಲೆ ಕೇವಲ ಆರ್ಥಿಕ ಹಕ್ಕನ್ನು ಬಯಸುವುದಿಲ್ಲ. ಅದರಿಂದ ಜನಪ್ರಿಯತೆ, ಸ್ಥಾನಮಾನ, ಗೌರವ, ಘನತೆ ಇತ್ಯಾದಿಯನ್ನು ಬಯಸುತ್ತಾನೆ. ತಾನು ನೀಡಿರುವ ಕೊಡುಗೆಯನ್ನು ಸಮಾಜ ಗುರುತಿಸಿ ಅದಕ್ಕೆ ಸೂಕ್ತ ರೀತಿಯಲ್ಲಿ ಸ್ಪಂದಿಸಬೇಕೆಂದು ಬಯಸುತ್ತಾನೆ. ವ್ಯಕ್ತಿ ತನ್ನ ಬೌದ್ಧಿಕ ಸೃಷ್ಟಿಯನ್ನು ತನ್ನದೆಂದು ಹೇಳಿಕೊಳ್ಳುವ ಹಾಗೂ ಆ ಕೃತಿಯನ್ನು ಉಪಯೋಗಿಸಿದಾಗಲೆಲ್ಲಾ ತನ್ನ ಹೆಸರನ್ನು ಸೇರಿಸುವ ಅಧಿಕಾರವೇ ನೈತಿಕ ಹಕ್ಕು. ಅದೇ ರೀತಿ ತನ್ನ ಕೃತಿಯನ್ನು ತನಗೆ ಅಪಚಾರವಾಗುವ ರೀತಿಯಲ್ಲಿ ಉಪಯೋಗಿಸಿದರೆ ಅಥವಾ ತನ್ನ ಗೌರವ, ಘನತೆಗೆ ಧಕ್ಕೆಬರುವಂತೆ ಉಪಯೋಗಿಸಿದರೆ ಅದನ್ನು ತಡೆಗಟ್ಟುವ ಅಧಿಕಾರವೂ ನೈತಿಕ ಹಕ್ಕಿನಲ್ಲಿ ಸೇರಿದೆ. ನೈತಿಕ ಹಕ್ಕನ್ನು ಮೂರು ರೀತಿಯಲ್ಲಿ ವಿಂಗಡಿಸಲಾಗಿದೆ. ಮೊದಲನೆಯದು ಪ್ರಕಟಣೆಯ ಹಕ್ಕು – The Right of Publication. ಇದರ ಪ್ರಕಾರ ಕೃತಿಯನ್ನು ಪ್ರಕಟಿಸಬೇಕೆ ಅಥವಾ ಬೇಡವೆ ಎಂಬುದನ್ನು ನಿರ್ಧರಿಸುವ ಹಕ್ಕು ಕೃತಿಕಾರನಿಗೆ ಇರುತ್ತದೆ ಅಥವಾ ಮಾರುಕಟ್ಟೆಯಲ್ಲಿ ಈಗ ಲಭ್ಯವಿರುವ ಕೃತಿಯನ್ನು ಹಿಂಪಡೆಯುವ ಅಧಿಕಾರವೂ ಕೃತಿಕಾರನದೇ ಆಗಿರುತ್ತದೆ.

ಎರಡನೆಯದು, ಕರ್ತೃತ್ವದ ಹಕ್ಕು – The Right to Paternity. ಇದರ ಪ್ರಕಾರ ಪ್ರಕಟಿತ ಕೃತಿಯ ಮೇಲೆ ಕೃತಿಕಾರನೇ ಎಲ್ಲ ಹಕ್ಕುಗಳಿಗೂ ಒಡೆಯ. ಇನ್ಯಾರಿಗೂ ಕೃತಿಯ ಮೇಲೆ ಯಾವುದೇ ರೀತಿಯ ಹಕ್ಕು ಇಲ್ಲ ಎಂಬುದು ಇದರ ಸಾರಾಂಶ. ಮೂರನೆಯದು ಪ್ರಾಮಾಣಿಕತೆಯ ಹಕ್ಕು – The Right of Integrity. ಬೌದ್ಧಿಕ ಅಂಶವಿರುವ ಎಲ್ಲ ಕೃತಿಯೂ ಅದನ್ನು ರಚಿಸಿದ ಕೃತಿಕಾರನ ಸೃಜನಶೀಲತೆ, ಕುಶಲತೆ, ಬುದ್ಧಿ, ಶ್ರಮ ಇತ್ಯಾದಿಯನ್ನು ಒಳಗೊಂಡಿರುತ್ತದೆ. ಕೃತಿ ಇರುವವರೆಗೂ ಆ ಕೃತಿಕಾರನ ಹೆಸರು ಇದ್ದೇ ಇರುತ್ತದೆ. ಆದ್ದರಿಂದ ಕೃತಿಯನ್ನು ತಿದ್ದುವುದಾಗಲಿ, ಬದಲಿಸುವುದಾಗಲಿ ಅಥವಾ ಇನ್ಯಾವುದೆ ರೀತಿಯಲ್ಲಿ ಅದರ ಸ್ವರೂಪವನ್ನು ವಿಕೃತಗೊಳಿಸುವುದಾಗಲಿ ಮಾಡಬಾರದು. ಹಾಗೆ ಮಾಡಿದಲ್ಲಿ ಮೂಲ ಕೃತಿಕಾರನ ಗೌರವ, ಘನತೆ ಇತ್ಯಾದಿಗೆ ದಕ್ಕೆ ಉಂಟಾಗುತ್ತದೆ.

ಕೃತಿಸ್ವಾಮ್ಯವನ್ನು ಮತ್ತೊಬ್ಬರಿಗೆ ಹಸ್ತಾಂತರಿಸುವ ಇಲ್ಲವೆ ಅದನ್ನು ಷರತ್ತುಗಳಿಗೆ ಬದ್ಧವಾದ ಪರವಾನಗಿ ನೀಡುವ ಅವಕಾಶವೂ ಕಾಪಿರೈಟ್ ಕಾನೂನಿನಲ್ಲಿದೆ. ಕೃತಿಸ್ವಾಮ್ಯವನ್ನು ಕೃತಿಕಾರನು ತನ್ನ ಸ್ವಂತ ಆರ್ಥಿಕ ಲಾಭಕ್ಕಾಗಿ ಹಸ್ತಾಂತರಿಸಬಹುದು. ರಾಯಧನ(ರಾಯಲ್ಟಿ)ಕ್ಕಾಗಿ ಸಹ ಹಸ್ತಾಂತರಿಸಬಹುದು. ಕೃತಿಸ್ವಾಮ್ಯವನ್ನು ಇಡಿಯಾಗಿ ಇಲ್ಲವೆ ಕೆಲವೊಂದು ಭಾಗಗಳನ್ನು ಹಸ್ತಾಂತರಿಸಲು ಕಾನೂನಿನಲ್ಲಿ ಅವಕಾಶವಿದೆ. ಹಾಗೆಯೇ ಕೃತಿಸ್ವಾಮ್ಯವನ್ನು ಜೀವನ ಪರ್ಯಂತ ಇಲ್ಲವೆ ಕೆಲವು ವರ್ಷಗಳಿಗೆ ಮಾತ್ರ ಹಸ್ತಾಂತರಿಸಲೂಬಹುದು. ಇದೆಲ್ಲವೂ ಕೃತಿಕಾರನಿಗಿರುವ ಸ್ವಾತಂತ್ರ. ಕೃತಿಸ್ವಾಮ್ಯದ ಹಕ್ಕನ್ನು ಪರವಾನಿಗಿ ಮೂಲಕ ನೀಡುವ ಅಧಿಕಾರ ಕೃತಿಕಾರರಿಗೆ ನೀಡಲಾಗಿದೆ. ಕೃತಿಕಾರ ಇಲ್ಲವೆ ಆತನ ವಾರಸುದಾರರು ಪರವಾನಗಿ ನೀಡಬಹುದು. ಕೃತಿಸ್ವಾಮ್ಯವಿದ್ದರೂ ಕೆಲವೊಂದು ಸಂದರ್ಭದಲ್ಲಿ ಆ ಕೃತಿಯನ್ನು ಒತ್ತಾಯಪೂರ್ವಕ ಪರವಾನಗಿ (Compulsory License) ಮೂಲಕ ಪ್ರಕಟನೆಗೆ ಬಳಸಿಕೊಳ್ಳಬಹುದಾಗಿದೆ.

ಕಾಪಿರೈಟ್ ಕಾನೂನು ಎಷ್ಟೇ ಶಕ್ತಿಶಾಲಿಯಾಗಿದ್ದರೂ ಕೃತಿಸ್ವಾಮ್ಯದ ಉಲ್ಲಂಘನೆ ನಡೆಯುತ್ತಲೇ ಇದೆ. ಕೃತಿಸ್ವಾಮ್ಯದ ಉಲ್ಲಂಘನೆ ಆಗಿದೆ ಎಂದು ಆಪಾದಿಸಿ ನ್ಯಾಯಾಲಯದಲ್ಲಿ ನೂರಾರು ದೂರುಗಳು ದಾಖಲಾಗುತ್ತಿದೆ. ಅನೇಕ ದೂರುಗಳು ಸುಪ್ರೀಂಕೋರ್ಟ್ ಮೆಟ್ಟಲು ಹತ್ತಿರುವುದೂ ಇದೆ. ವಿಶೇಷವಾಗಿ ಸಿನಿಮಾ ಮತ್ತು ಸಂಗೀತ ಕ್ಷೇತ್ರದಲ್ಲಿ ಕೃತಿಸ್ವಾಮ್ಯದ ಅಪಾದನೆಗಳು ಅನೇಕ. ಯಾವುದು ಕೃತಿಸ್ವಾಮ್ಯದ ಉಲ್ಲಂಘನೆ ಎಂಬುದನ್ನು ಕಾಪಿರೈಟ್ ಕಾನೂನಿನಲ್ಲಿ ವಿವರಿಸಲಾಗಿದೆ. ಮೂಲ ಕೃತಿಯ ಕಾಪಿರೈಟ್ ಹೊಂದಿರುವವರ ಅಥವಾ ಪರವಾನಗಿ ಹೊಂದಿರುವ ಅಥವಾ ಅವರ ಅಪ್ಪಣೆ ಇಲ್ಲದೆ ಅವರ ಹಕ್ಕುಗಳಿಗೆ ಧಕ್ಕೆ ಉಂಟುಮಾಡುವ ಯಾವುದೇ ಕ್ರಮ ಕಾಪಿರೈಟ್‌ನ ಉಲ್ಲಂಘನೆ ಆಗುತ್ತದೆ. ಉದಾಹರಣೆಗೆ, ಮತ್ತೊಬ್ಬರ ಕೃತಿಯನ್ನು ಮರುಮುದ್ರಣ ಮಾಡುವುದು, ಅಪ್ಪಣೆಯಿಲ್ಲದೆ ಪ್ರಕಟಿಸುವುದು, ಕೃತಿಯಲ್ಲಿರುವ ಮಾಹಿತಿಯನ್ನು ಸಾರ್ವಜನಿಕರಿಗೆ ಹಂಚುವುದು, ಕೃತಿಯನ್ನು ಆಧರಿಸಿದ ಪ್ರದರ್ಶನ ನಡೆಸುವುದು, ಭಾಷಾಂತರ ಇತ್ಯಾದಿ ಕಾಪಿರೈಟ್ ಉಲ್ಲಂಘನೆ ಆಗುತ್ತದೆ. ಆದರೆ ಕೆಲವೊಂದು ಕ್ರಮಗಳಿಗೆ ವಿನಾಯಿತಿ ನೀಡಲಾಗಿದೆ. ಒಂದು ಕಾದಂಬರಿ ಅಥವಾ ಕಥೆ ಅಥವಾ ಇನ್ನಾವುದೆ ಕೃತಿಯ ವಿಮರ್ಶೆ ಮಾಡುವಾಗ ಕೃತಿಯ ಕೆಲವು ಭಾಗಗಳನ್ನು ಉಲ್ಲೇಖಿಸುವುದು ಕಾಪಿರೈಟ್ ಉಲ್ಲಂಘನೆ ಆಗುವುದಿಲ್ಲ. ವಿಶೇಷ ಅಧ್ಯಯನಕ್ಕೆ ಕೃತಿಯನ್ನು ಬಳಸಿಕೊಳ್ಳಬಹುದು. ಕಂಪ್ಯೂಟರ್ ಪ್ರೋಗ್ರಾಮ್‌ನ ಬ್ಯಾಕ್‌ಅಪ್ ಪ್ರತಿಮಾಡಿಕೊಳ್ಳುವುದು ಕೃತಿಸ್ವಾಮ್ಯದ ಉಲ್ಲಂಘನೆ ಆಗುವುದಿಲ್ಲ. ಸರ್ಕಾರ ಹೊರಡಿಸುವ ಕಾನೂನು, ವಿಧೇಯಕ, ಸುತ್ತೋಲೆ, ಸಮಿತಿಯ ನಡಾವಳಿ ಇತ್ಯಾದಿಯನ್ನು ಉಲ್ಲೇಖಿಸುವುದು ಇಲ್ಲವೆ ಬಳಸಿಕೊಳ್ಳುವುದಕ್ಕೆ ಅವಕಾಶವಿದೆ.

ಕಾಪಿರೈಟ್ ಉಲ್ಲಂಘನೆ ಆಗಿದ್ದಲ್ಲಿ ಮೂಲ ಕೃತಿಕಾರರು ಅದರ ವಿರುದ್ಧ ಕ್ರಮ ಕೈಗೊಳ್ಳಬಹುದು. ಮೂಲ ಕೃತಿಕಾರರು ತಪ್ಪಿಸ್ಥತರ ವಿರುದ್ಧ ಸಿವಿಲ್ ಅಥವಾ ಕ್ರಿಮಿನಲ್ ದಾವೆ ಹೂಡಬಹುದು. ಉಲ್ಲಂಘನೆ ಆಗಿದೆ ಎನ್ನಲಾದ ದಿನದಿಂದ ಮೂರು ವರ್ಷದೊಳಗೆ ಜಿಲ್ಲಾ ನ್ಯಾಯಾಲಯ ಇಲ್ಲವೆ ಹೈಕೋರ್ಟ್‌ನಲ್ಲಿ ದೂರು ದಾಖಲಿಸಬೇಕು. ತಾನು ಕೃತಿಸ್ವಾಮ್ಯಕ್ಕೆ ಚ್ಯುತಿ ತರುತ್ತಿದ್ದೇನೆ ಎಂದು ತಿಳಿದೂ ಆ ಕೃತ್ಯ ಎಸಗಿದಲ್ಲಿ ತಪ್ಪಿತಸ್ಥರನ್ನು ಕ್ರಿಮಿನಲ್ ಶಿಕ್ಷೆಗೆ ಗುರಿಪಡಿಸಬಹುದು. ಇದೆಲ್ಲದರೊಂದಿಗೆ ಮೂಲ ಕೃತಿಕಾರರು ಮತ್ತೊಂದು ರೀತಿಯ ಪರಿಹಾರ ಕೇಳಬಹುದು. ತಮ್ಮ ಕೃತಿಯ ಪ್ರತಿಗಳು, ಅದಕ್ಕೆ ಸಂಬಂಧಿಸಿದ ಸಾಮಗ್ರಿ ಇತ್ಯಾದಿಯನ್ನು ವಶಪಡಿಸಿಕೊಳ್ಳುವಂತೆ ನ್ಯಾಯಾಲಯದಿಂದ ಆದೇಶ ಪಡೆಯಬಹುದು. ಇದನ್ನು ಆಂಟನ್ ಪಿಲ್ಲರ್ ಆರ್ಡರ್ [Anton Piller order) ಎಂದು ಕರೆಯಲಾಗಿದೆ. ಉದಾಹರಣೆಗೆ ಒಂದು ಚಲನಚಿತ್ರದ ನಕಲಿ ಸಿಡಿಗಳನ್ನು ತಯಾರಿಸುವ ಸಂಸ್ಥೆಯ ಒಳಹೊಕ್ಕು ಅಲ್ಲಿರುವ ಸಿಡಿ ಇತ್ಯಾದಿಯನ್ನು ವಶಪಡಿಸಿಕೊಳ್ಳಬಹುದು.



ಇದಲ್ಲದೆ ಕೃತಿಸ್ವಾಮ್ಯ ಕಾನೂನಿನಲ್ಲಿ ರೇಡಿಯೋ ಬ್ರಾಡ್‌ಕ್ಯಾಸ್ಟಿಂಗ್ ಮತ್ತು ಪರ್ಫಾರ್ಮರ್ಸ್‌ಗೆ ಪ್ರತ್ಯೇಕ ಹಕ್ಕುಗಳನ್ನು ನೀಡಲಾಗಿದೆ. ಇತ್ತೀಚೆಗಷ್ಟೇ, ಕಾಪಿರೈಟ್ ವಿಧೇಯಕ 2010 ಲೋಕಸಭೆಯ ಅಂಗೀಕಾರ ಪಡೆದಿದ್ದು ಸದ್ಯದಲ್ಲೇ ಜಾರಿಗೆ ಬರಲಿದೆ. ಈ ಹೊಸ ಕಾಯ್ದೆಯಲ್ಲಿ ಸಿನಿಮಾ ಮತ್ತು ಸಂಗೀತದ ಉದ್ಯಮಕ್ಕೆ ಸಂಬಂಧಿಸಿದ ಮಹತ್ವದ ಬದಲಾವಣೆಯನ್ನು ತರಲು ಉದ್ದೇಶಿಸಲಾಗಿದೆ.



# ಕಾಪಿರೈಟ್ ಕಾಯಿದೆ: ಮೊಕದ್ದಮೆಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ

ಎಸ್.ಆರ್. ರವಿಪ್ರಕಾಶ್

ಈ ಲೇಖನದಲ್ಲಿ ಬರಹಗಾರರಿಗೆ ಸಂಬಂಧಿಸಿದಂತೆ ಗಮನಹರಿಸಲಾಗಿದೆಯೇ ಹೊರತು ಬೇರೆ ಪ್ರಕಾರಗಳ ಬಗ್ಗೆ ಅಲ್ಲ. ಲೇಖಕನಿಗೆ ತನ್ನ ಬರಹದ ಮೇಲೆ ಕಾಪಿರೈಟ್ (ಕೃತಿಸ್ವಾಮ್ಯ) ಇದೆ ಎಂದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿದೆ. ಆದರೆ ಹೇಗೆ ಯಾವ ಸಂದರ್ಭಗಳಲ್ಲಿ ಎಂಬುದು ಹೆಚ್ಚಿನವರಿಗೆ ಗೊತ್ತಿರಲಾರದು. ಅದರ ಬಗ್ಗೆ ಮೇಲ್ನೋಟದ ಮಾಹಿತಿ ಕೊಡುವುದಷ್ಟೆ ಈ ಲೇಖನದ ಉದ್ದೇಶ.

ಕಾಪಿರೈಟ್ ಕಾಯಿದೆಯ ಸೆಕ್ಷನ್ ೧೩ (೧) (a) ದಲ್ಲಿ ಕಾಪಿರೈಟ್ ಬರಹದ ಮೂಲಕೃತಿಯಲ್ಲಿ ಇರುತ್ತದೆ ಎಂದು ಹೇಳಿದೆ. ಕಾಯಿದೆಯ ಈ ಸೆಕ್ಷನ್ ಇಂಗ್ಲಿಷಿನಲ್ಲಿ "The copyright shall subsist" ಎಂಬ ಪದಪುಂಜಗಳನ್ನು, ಹಾಗೆಯೆ "in original works" ಎಂಬ ಪದಪುಂಜಗಳನ್ನು ಬಳಸಲಾಗಿದೆ. ಅಂದರೆ ಮೂಲಬರಹವು ಕೃತಿಯಾಗಿ ಮೂಡಿಬರುತ್ತಿದ್ದಂತೆ ಅದರ ಜೊತೆಗೆ ಕಾಪಿರೈಟ್ ಕೂಡ ಹುಟ್ಟಿಬರುತ್ತದೆ.

ಹಾಗಿದ್ದರೆ ಕಾಪಿರೈಟ್ ಅಂದರೇನು? ಕಾಪಿರೈಟ್ ಕಾಯಿದೆಯ ಸೆಕ್ಷನ್ ೧೪ರಲ್ಲಿ ಇದನ್ನು ವಿವರವಾಗಿ ಹೇಳಿದೆ. ಅದರ ಪ್ರಕಾರ ಲೇಖಕನಿಗೆ ಪ್ರತ್ಯೇಕವಾಗಿ ತನಗೆ ಮಾತ್ರವೇ ತನ್ನ ಲೇಖನದ ಮೇಲೆ ಇರುವಂತಹ ಲೇಖಕನ ಹಕ್ಕು. ಇದರ ಪ್ರಕಾರ ಲೇಖಕನ ಅನುಮತಿ ಇಲ್ಲದೆ, ಇನ್ನೊಂದು ರೂಪಕ್ಕೆ ಪರಿವರ್ತಿಸುವುದು, ಇನ್ನೊಂದು ಮಾಧ್ಯಮಕ್ಕೆ ರೂಪಾಂತರಿಸುವುದು, ಇಲೆಕ್ಟ್ರಾನಿಕ್ ತಂತ್ರಜ್ಞಾನದ ಮೂಲಕ ಶೇಖರಿಸಿಡುವುದು, ಪ್ರತಿಗಳನ್ನು ಮಾಡಿ ವಿತರಿಸುವುದು, ಸಾರ್ವಜನಿಕ ಸಂಪರ್ಕಕ್ಕೆ ತರುವುದು, ಸಾರ್ವಜನಿಕ ಪ್ರದರ್ಶನ ಮಾಡುವುದು, ಸಿನೆಮಾ ಅಥವಾ ಶಬ್ದಮುದ್ರಣ ಮಾಡುವುದು, ಭಾಷಾಂತರ ಮಾಡುವುದು ಮತ್ತು ಇತ್ಯಾದಿ ಯಾವುದೇ ಕೆಲಸಕ್ಕೆ ಹೊಂದಿಸಿಕೊಳ್ಳುವುದನ್ನು ಮಾಡುವ ಹಾಗಿಲ್ಲ ಮತ್ತು ಅಂತಹವುಗಳನ್ನು ಲೇಖಕನ ಅಧಿಕೃತ ಅಂಗೀಕಾರದೊಂದಿಗೆ ಮಾಡಬೇಕಾಗಿದೆ. ಇಂತಹ ಅಧಿಕಾರ ಲೇಖಕನಿಗೆ ಮಾತ್ರವೇ ಪ್ರತ್ಯೇಕವಾಗಿ ಇರುವಂತಹದಾಗಿದೆ. ಇಂತಹ ಅಧಿಕಾರ ಮತ್ತು ಹಕ್ಕನ್ನು ಕಾನೂನು ಪ್ರಕಾರ ಕಾಪಿರೈಟ್ ಎನ್ನಲಾಗಿದೆ.



ಈ ಹಿಂದೆ ಹೇಳಿದಂತೆ ಕಾಪಿರೈಟ್ ಬರಹದ ಮೂಲಕೃತಿ (original literary work) ಯಲ್ಲಿರುತ್ತದೆ. 'ಮೂಲಕೃತಿ' (original work) ಎಂದರೇನು? ಬರಹ ಕೃತಿ (literary work) ಮೂಲವೇ (original) ಅಥವಾ ಚಿಂತನೆ (thoughts) ಮೂಲವೇ ಎಂಬ ಬಗ್ಗೆ ಕಾನೂನಿನಲ್ಲಿ ಸಾಕಷ್ಟು ಜಿಜ್ಞಾಸೆ ಬಹಳ ಹಿಂದೆಯೇ ನಡೆದಿದೆ. ೧೯೨೪ನೇ ಇಸವಿಯಷ್ಟು ಹಿಂದೆ ಪ್ರಿವಿಕೌನ್ಸಿಲ್ ಈ ಬಗ್ಗೆ ತೀರ್ಮಾನ ಕೊಟ್ಟಿದೆ. (ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ಆಡಳಿತದ ಕಾಲದಲ್ಲಿ ಭಾರತಕ್ಕೆ ಲಂಡನಿನಲ್ಲಿರುವ ಪ್ರಿವಿಕೌನ್ಸಿಲ್ ಸರ್ವೋಚ್ಚ ನ್ಯಾಯಾಲಯವಾಗಿದ್ದಿತು) A.I.R. 1924 PC Page 75 ಎಂಬ ತೀರ್ಪುಗಳನ್ನು ಪ್ರಕಟಿಸುವ ನಿಯತಕಾಲಿಕದಲ್ಲಿ ವರದಿಯಾಗಿರುವ "ಮ್ಯಾಕ್‌ಮಿಲನ್ ಆಂಡ್ ಕೋ – ವಿರುದ್ಧ ಕೆ. ಆಂಡ್ ಜೆ. ಕೂಪರ್" ಎಂಬ ಕೇಸಿನಲ್ಲಿ ಪ್ರಿವಿಕೌನ್ಸಿಲ್ ಹೇಳಿದಂತೆ ಕಾಪಿರೈಟ್ ಕಾಯಿದೆಯು ಮನೋಚಿಂತನೆಯ ಬಗ್ಗೆ ಗಮನವಿಟ್ಟಿಲ್ಲ. ಆದರೆ ಮನೋಚಿಂತನೆಯ ಅಕ್ಷರರೂಪದ ಅಭಿವ್ಯಕ್ತಿಯ ಬಗ್ಗೆ ಗಮನವಿಟ್ಟಿದೆ. ಆ ಕೇಸಿನಲ್ಲಿ ಪ್ರಿವಿಕೌನ್ಸಿಲ್ ಈ ಕೆಳಗಿನಂತೆ ಹೇಳಿದೆ:

"The word original does not mean that the work must be expression of original or innovative thought. Copyright Acts are not concerned with the origin of ideas, but, with the expression of that and in case, of "literary work" with the expression of thought in print or in writing."

ಅಭಿವ್ಯಕ್ತಗೊಂಡ ಮೂಲ ಬರಹದ ಕೃತಿಯಲ್ಲಿ ಮಾತ್ರವೇ ಕಾಪಿರೈಟ್ ಇದೆ ಎಂದಾದರೆ ಮೂಲ ಬರಹವನ್ನು ಪರೀಕ್ಷಿಸುವುದು ಹೇಗೆ? (The test of originality). ಇದನ್ನು ಪರೀಕ್ಷಿಸಬೇಕಾದರೆ ಬರಹದಲ್ಲಿ ಲೇಖಕನ ಪ್ರಾವೀಣ್ಯತೆ, ಜಾಣ್ಮೆ, ಶ್ರಮ ಮತ್ತು ತಿಳುವಳಿಕೆಗಳು ಸಮ್ಮಿಳಿತವಾಗಿವೆಯೆ ಎಂಬುದನ್ನು ಪರೀಕ್ಷಿಸಬೇಕು. ಹೌದೆಂದಾದರೆ ಲೇಖಕನಿಗೆ ಕಾಪಿರೈಟ್ ಕಾಯಿದೆಯ ರಕ್ಷಣೆ ಸಿಗುತ್ತದೆ. ಇಲ್ಲವಾದರೆ ಇಲ್ಲ. ಈ ಬಗ್ಗೆ ಮಧ್ಯಪ್ರದೇಶ ಹೈಕೋರ್ಟ್, "ಮಿಶ್ರಬಂಧು ಕಾರ್ಯಾಲಯ ವಿರುದ್ಧ ಶಿಯೊ ರತನ್‌ಲಾಲ್ ಕೋಶಾಲ್" ಎಂಬ ಕೇಸಿನಲ್ಲಿ ಕೊಟ್ಟ ತೀರ್ಪಿನಲ್ಲಿ (ಇದು AIR 1970 M.P. Page 261 ಎಂಬ ನಿಯತಕಾಲಿಕದಲ್ಲಿ ವರದಿಯಾಗಿದೆ) ಹೀಗೆ ಹೇಳಿದೆ:

"The real test in adjuding the originality of a work is wheather it involved any skill, labour and knowledge of the author, and that being fulfilled he would be protected by law and no one else was permitted to steal and appropriate for himself the result of labour, skill and learning."

ಮೇಲೆ ಹೇಳಿದ ಅಂಶಗಳು ವಿಶಾಲವಾಗಿ ಹಾಕಿಕೊಂಡ ಪರಿಗಣನೆಗಳು. ನೈಜ ಕೇಸುಗಳು ಕೋರ್ಟುಗಳಲ್ಲಿ ದಾಖಲಾದಾಗ ಸಾಂದರ್ಭಿಕವಾಗಿ ಬೇರೆಬೇರೆ ಅಂಶಗಳು ಪರಿಗಣಿಸಲ್ಪಡುತ್ತವೆ. ಉದಾಹರಣೆಗೆ, ನಿಘಂಟುಗಳು, ಪಠ್ಯ ಪುಸ್ತಕಗಳು, ಪ್ರಶ್ನೆಪತ್ರಿಕೆಗಳು, ಇತ್ಯಾದಿ. ಜಾಣ್ಮೆ, ಶ್ರಮ ಮತ್ತು ತಿಳುವಳಿಕೆ (skill, labour and knowledge) ಇವುಗಳು ಪ್ರತಿ ಕೇಸಿನಲ್ಲಿ ಕೂಡ ಆಯಾಯ ಕೇಸುಗಳಿಗೆ ಸಂಬಂಧಿಸಿದಂತೆ ಇರುವ ಅಂಶಗಳನ್ನು ಹೊಂದಿಕೊಂಡು ತುಲನಾತ್ಮಕವಾಗಿ ಪರಿಶೀಲಿಸಬೇಕಾದ ವಿಷಯಗಳಾಗಿವೆ.

ಇನ್ನೊಂದು ಬಹುಮುಖ್ಯವಾದ ವಿಚಾರ ಬರಹಗಾರರಿಗೆ ಸಂಬಂಧಪಟ್ಟಂತೆ ಇರುವುದು ಭಾಷಾಂತರ. ಒಂದು ಕೃತಿಯು ಭಾಷಾಂತರವಾದಾಗ ಅದರಲ್ಲಿ ಕಾಪಿರೈಟ್ ಹೇಗೆ ನಿರ್ಣಯಿಸಲ್ಪಡುತ್ತದೆ? ಇದು ಬಹಳ ಪ್ರಮುಖವಾದ ಪ್ರಶ್ನೆ. ಮೊದಲೇ ಹೇಳಿದಂತೆ ಯಾವುದೇ ಕೃತಿಯನ್ನು ಕೃತಿಕಾರನ ಅನುಮತಿ ಇಲ್ಲದೆ ಭಾಷಾಂತರ ಮಾಡುವಂತಿಲ್ಲ. ಹಾಗೇನಾದರೂ ಮಾಡಿದರೆ ಅದು ಶಿಕ್ಷಾರ್ಹ ಅಪರಾಧವಾಗುತ್ತದೆ. ಅಲ್ಲದೆ ಪರಿಹಾರ ಕೂಡ ಕೊಡಬೇಕಾಗುವುದು. ಈ ಅನುಮತಿಯನ್ನು ಕೊಡುವ ಹಕ್ಕು ಮತ್ತು ಅಧಿಕಾರ ಮೂಲ ಕೃತಿಕಾರನಿಗೆ ಮಾತ್ರವೇ. ಒಂದು ಕೃತಿಯನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಭಾಷಾಂತರ ಮಾಡಲು ಭಾಷಾಂತರಕಾರನಿಗೆ ಮೂಲಕೃತಿಯ ಸೊಗಡನ್ನು ಹೀಗೆಯೇ ಉಳಿಸಿಕೊಂಡು ಭಾಷಾಂತರಿಸುವ ಜಾಣ್ಮೆಯ ಜೊತೆಗೆ ಅದಕ್ಕೆ ತಕ್ಕ ಶ್ರಮವನ್ನು ಹಾಕಬೇಕಾಗುತ್ತದೆ. ಇದಲ್ಲದೆ ಎರಡು ಭಾಷೆಗಳ ಪರಿಣತಿ ಇರಬೇಕಾಗುತ್ತದೆ. ಆದ್ದರಿಂದ ಭಾಷಾಂತರದ ಕೃತಿಯಲ್ಲಿ ಭಾಷಾಂತರಕಾರನಿಗೆ ಸಂಪೂರ್ಣ ಕಾಪಿರೈಟ್ ಹಕ್ಕು ಇರುತ್ತದೆ. ಈ ಹಕ್ಕು ಭಾಷಾಂತರಕಾರನಿಗೆ ಬರಬೇಕಾದರೆ ಭಾಷಾಂತರಕಾರನು ಮೂಲಕೃತಿಯ ಕಾಪಿರೈಟ್ ಹಕ್ಕುದಾರನಿಂದ ಅನುಮತಿ ಪಡೆದಿರಬೇಕು. ಈ ಬಗ್ಗೆ ವಿಸ್ತೃತವಾದ ವಿಮರ್ಶೆ ಹಲವು ತೀರ್ಪುಗಳಲ್ಲಿದೆ. ಈ ಪೈಕಿ "ಬ್ಲಾಕ್‌ವುಡ್ ಅಂಡ್ ಸನ್ಸ್ ವಿರುದ್ಧ ಪರಶುರಾಮನ್" ಎಂಬ ಕೇಸು ಪ್ರಮುಖವಾದದ್ದು. ಇದು AIR 195 ಮದ್ರಾಸ್ P. 410 ಎಂಬ ನಿಯತಕಾಲಿಕದಲ್ಲಿ ವರದಿಯಾಗಿದೆ.



ಕಾಪಿರೈಟ್ ಹಕ್ಕನ್ನು ಬೌದ್ಧಿಕ ಆಸ್ತಿ ಎಂದು ಪರಿಗಣಿಸಲಾಗಿದೆ. ಆಸ್ತಿಯೆಂದು

ಪರಿಗಣಿಸುವುದರಿಂದ ಕಾಪಿರೈಟನ್ನು ಇನ್ನೊಬ್ಬರಿಗೆ ವಹಿಸಲು, ನಿಯೋಜಿಸಲು, (ವರ್ಗಾಯಿಸಲು) ಬರುತ್ತದೆ. ಇದು ಕಾನೂನಿನ ದೃಷ್ಟಿಯಿಂದ ಬಹಳ ಪ್ರಮುಖವಾದ ವಿಚಾರ. ಇದರ ವ್ಯಾಪ್ತಿಯಲ್ಲಿ ಲೇಖಕ ಮಾತ್ರವಲ್ಲದೆ ಪ್ರಕಾಶಕರು, ಮುದ್ರಕರು, ಮಾರಾಟಗಾರರು, ವಿತರಕರು, ಭಾಷಾಂತರಕಾರರು, ಬೇರೆ ದೃಶ್ಯ ಅಥವಾ ಶ್ರವಣ ಮಾಧ್ಯಮಕ್ಕೆ ಪರಿವರ್ತನೆ ಮಾಡುವವರು ಇತ್ಯಾದಿಯಾಗಿ ಎಲ್ಲರೂ ಸೇರಿರುತ್ತಾರೆ. ಹಾಗಾದರೆ ಕಾಪಿರೈಟ್‌ನ ವರ್ಗಾವಣೆ ಹೇಗೆ? ಅವು ಏನೇನು ಒಳಗೊಂಡಿರಬೇಕು?

ವರ್ಗಾವಣೆ (ವಹಿಸುವಿಕೆ, ನಿಯೋಜಿಸುವಿಕೆ ಅಥವಾ Assignment) ಅಂದ ತಕ್ಷಣ ಅಲ್ಲಿ ಒಂದು ಒಪ್ಪಂದವಿರಲೇಬೇಕು. ಸಾಮಾನ್ಯವಾಗಿ ಒಪ್ಪಂದಗಳು ಬಾಯ್ಮಾತಿನಲ್ಲಿ ಅಥವಾ ಬರವಣಿಗೆಯಲ್ಲಿ ಇರುತ್ತವೆ. ಭಾರತೀಯ ಒಪ್ಪಂದ ಕಾಯಿದೆ (Indian Contract Act) ಈ ಎರಡು ರೀತಿಯ ಒಪ್ಪಂದಗಳನ್ನು ಗುರುತಿಸಿ ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಆದರೆ ಕಾಪಿರೈಟ್ ಕಾಯಿದೆಯು ಬರವಣಿಗೆಯ ಒಪ್ಪಂದವನ್ನು ಮಾತ್ರವೇ ಪರಿಗಣಿಸುತ್ತದೆ. ಬಾಯ್ಮಾತಿನ ಒಪ್ಪಂದವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಈ ಒಪ್ಪಂದವು ಸಂಪೂರ್ಣ ಹಕ್ಕಿನ ವರ್ಗಾವಣೆ ಇರಬಹುದು ಅಥವಾ ಆಂಶಿಕ ಹಕ್ಕಿನ ವರ್ಗಾವಣೆ ಇರಬಹುದು. ಇದನ್ನು ಖಾಯಂ ಆಗಿ ವಿಕ್ರಯ ಕೂಡ ಮಾಡಬಹುದು. ಕೊಡುವ ಅನುಮತಿಗೆ ಭೌಗೋಳಿಕ ವ್ಯಾಪ್ತಿಯನ್ನು ಕೂಡ ನಿಗದಿಪಡಿಸಬಹುದು. ಕಾಪಿರೈಟ್ ಕಾಯಿದೆಯ ಸೆಕ್ಷನ್ ೧೯ ಈ ದೃಷ್ಟಿಯಿಂದ ಬಹಳ ಪ್ರಮುಖವಾಗಿದೆ. ಈ ಸೆಕ್ಷನ್ನಿನ ಪ್ರಕಾರ ಈ ಕೆಳಗಿನ ಅಂಶಗಳು ಬಹಳ ಪ್ರಾಮುಖ್ಯವಾದವುಗಳು:

೧. ಕಾಪಿರೈಟ್‌ನ್ನು ಇನ್ನೊಬ್ಬನಿಗೆ ವಹಿಸುವಾಗ ಈ ಒಪ್ಪಂದವು ಬರವಣಿಗೆಯಲ್ಲಿಯೇ ಇರಬೇಕು.

೨. ಒಪ್ಪಂದದಲ್ಲಿ ಯಾವ ಕೃತಿ ಎಂದು ಸರಿಯಾಗಿ ಗುರುತಿಸಬೇಕು.

೩. ಯಾವ ಹಕ್ಕನ್ನು ವಹಿಸಿದೆ ಎಂದು ಸ್ಪಷ್ಟವಾಗಿ ಕಾಣಿಸಬೇಕು. ಅಂದರೆ, ಪ್ರತಿಮಾಡುವ ಹಕ್ಕು, ಮುದ್ರಿಸುವ ಹಕ್ಕು, ಮಾರಾಟ ಮಾಡುವ ಹಕ್ಕು, ಸಿನೆಮಾ, ನಾಟಕ, ಪ್ರದರ್ಶನ ಇತ್ಯಾದಿ ಸ್ಪಷ್ಟಪಡಿಸಬೇಕು.

೪. ಸಮಯದ ಅವಧಿಯನ್ನು ಸ್ಪಷ್ಟಪಡಿಸಬೇಕು. ಎಷ್ಟು ದಿನಗಳು / ತಿಂಗಳು / ವರ್ಷ ಇತ್ಯಾದಿ ಸ್ಪಷ್ಟವಾಗಿ ಕಾಣಿಸಬೇಕು. ಎಷ್ಟು ಅವಧಿಯವರೆಗೆ ಎಂದು ಒಪ್ಪಂದದಲ್ಲಿ ಕಾಣಿಸಲಿಲ್ಲವೆಂದಾದರೆ ಕಾಪಿರೈಟ್‌ನ್ನು ಐದು ವರ್ಷಗಳವರೆಗೆ ಕೊಡಲಾಗಿದೆ ಎಂದು ಅರ್ಥೈಸಲಾಗುವುದು.

೫. ಒಪ್ಪಂದದಲ್ಲಿ ಭೌಗೋಳಿಕ ವ್ಯಾಪ್ತಿಯನ್ನು ಕಾಣಿಸಬೇಕು. ಭೌಗೋಳಿಕ ವ್ಯಾಪ್ತಿಯು ಕಾಣಿಸಲಿಲ್ಲವೆಂದಾದರೆ ಸಂಪೂರ್ಣ ಭಾರತ ವ್ಯಾಪ್ತಿಗೆ ಪಡೆದುಕೊಂಡ ಕಾಪಿರೈಟ್ ಅನ್ವಯವಾಗುತ್ತದೆ.

೬. ಗೌರವಧನದ ಬಗ್ಗೆ ಕೂಡ ಒಪ್ಪಂದದಲ್ಲಿ ಸ್ಪಷ್ಟಗೊಳಿಸಿರಬೇಕು.

೭. ಕಾಪಿರೈಟ್‌ನ್ನು ವಹಿಸಿದ ಮೇಲೆ, ಆ ದಿನಾಂಕದಿಂದ ಒಂದು ವರ್ಷದೊಳಗೆ ಕಾರ್ಯೋನ್ಮುಖವಾಗದಿದ್ದಲ್ಲಿ ಅಥವಾ ಜಾರಿಗೊಳ್ಳದೆ ಇದ್ದಲ್ಲಿ, ಮಾಡಿಕೊಂಡ ಒಪ್ಪಂದವು ತನ್ನಿಂದತಾನೆ ನಿಷ್ಕ್ರಿಯಗೊಂಡಿದೆ ಎಂದು ಅರ್ಥ (Deemed to have lapsed) ಈ ರೀತಿ ನಿಷ್ಕ್ರಿಯಗೊಳ್ಳಲಿಲ್ಲ ಎಂದಾಗಬೇಕಾದರೆ ಈ ಬಗ್ಗೆ ಒಪ್ಪಂದದಲ್ಲಿ ಸ್ಪಷ್ಟವಾಗಿ ಕಾಣಿಸಿರಬೇಕು.



ಕಾಪಿರೈಟನ್ನು ವಹಿಸುವಾಗ ಅಥವಾ ವರ್ಗಾಯಿಸುವಾಗ ಅದು ಕಡ್ಡಾಯವಾಗಿ ಬರವಣಿಗೆಯಲ್ಲಿರಬೇಕು ಎಂದು ಕರ್ನಾಟಕದ ಉಚ್ಚನ್ಯಾಯಾಲಯವು ಎ.ಐ.ಆರ್. ೧೯೯೨ ಕರ್ನಾಟಕ ಪುಟ ೧ (AIR 1992 Kart. P. 1) ಎಂಬ ನಿಯತಕಾಲಿಕದಲ್ಲಿ ಪ್ರಕಟವಾದ "ಕೆ.ಎ. ವೇಣುಗೋಪಾಲಶೆಟ್ಟಿ ವಿರುದ್ಧ ಡಾ. ಸೂರ್ಯನಾಥ ಯು. ಕಾಮತ್" ಎಂಬ ಕೇಸಿನಲ್ಲಿ ಹೇಳಿದ ಪ್ರಕಾರ ಕಾಪಿರೈಟಿನ ವಹಿವಾಟಿನಲ್ಲಿ ಬಾಯ್ಮಾತಿನ ಒಪ್ಪಂದವು ಕಾನೂನುಬದ್ಧವಲ್ಲ.

ಕಾಪಿರೈಟನ್ನು ಇನ್ನೊಬ್ಬರಿಗೆ ಹಸ್ತಾಂತರಿಸುವಾಗ ಇನ್ನೂ ಒಂದು ಪ್ರಕಾರವಿದೆ. ಅದನ್ನು 'ಅನುಮತಿ' (license) ಎನ್ನಲಾಗಿದೆ. ಆಡುಭಾಷೆಯಲ್ಲಿ ಬಹಳ ಸುಲಭವಾಗಿ ಗೋಚರಿಸಿದರೂ ಕಾನೂನಿನಲ್ಲಿ ಅದಕ್ಕೆ ಪ್ರತ್ಯೇಕ ಅಸ್ತಿತ್ವವಿದೆ. ಒಪ್ಪಂದಕ್ಕೆ ಹೇಳಿದ ಎಲ್ಲಾ ಅಂಶಗಳು ಇದಕ್ಕೆ ಅನ್ವಯವಾಗುತ್ತದೆ. ಆದರೂ ಕೂಡ ಅತ್ಯಂತ ಸೂಕ್ಷ್ಮವಾದ ವ್ಯತ್ಯಾಸವಿದೆ. 'ಒಪ್ಪಂದ'ದಲ್ಲಿ (Assignment) ಆಂಶಿಕ ಅಥವಾ ಸಂಪೂರ್ಣ ವರ್ಗಾವಣೆ ಇರುತ್ತದೆ. 'ಅನುಮತಿ' (license) ಕೊಡುವಾಗ ಈ ರೀತಿಯ ಹಕ್ಕಿನ ವರ್ಗಾವಣೆ ಇರುವುದಿಲ್ಲ. ಆದ್ದರಿಂದ ಹಕ್ಕಿಗೆ ಚ್ಯುತಿ ಉಂಟಾದಾಗ ಅದನ್ನು ಪ್ರತಿರೋಧಿಸಿ, ಕಾಪಿರೈಟ್ ಹಕ್ಕು ತನ್ನದೇ ಎಂದು ಹೋರಾಡುವ ಕಾನೂನಿನ ನೆಲೆ ಮತ್ತು ಅಧಿಕಾರ ಒಪ್ಪಂದದಲ್ಲಿ ಆ ಹಕ್ಕನ್ನು ಪಡೆದುಕೊಂಡವನಿಗೆ ಇರುತ್ತದೆ. ಅಂತಹ ಅಧಿಕಾರ ಮತ್ತು ನೆಲೆ ಎರಡು ಕೂಡ ಕಾಪಿರೈಟಿನ 'ಅನುಮತಿ' ಪಡೆದುಕೊಂಡವನಿಗೆ ಇರುವುದಿಲ್ಲ. ಈ ಬಗ್ಗೆ ಸಾಕಷ್ಟು ತೀರ್ಮಾನಗಳು ನ್ಯಾಯಾಲಯದಿಂದ ಬಂದಿವೆ.

'ಒಪ್ಪಂದ' (Assignment) ಮತ್ತು 'ಅನುಮತಿ' (icense) ವ್ಯತ್ಯಾಸಗಳು, ಅದನ್ನು ಅರ್ಥೈಸುವ ಕ್ರಮ ಅದನ್ನು ವ್ಯಾಖ್ಯಾನಿಸಬೇಕಾದ ರೀತಿ ಇವುಗಳನ್ನು ತಿಳಿದುಕೊಳ್ಳುವುದೆಂದರೆ ಕಾನೂನಿನ ಸೂಕ್ಷ್ಮವಿಚಾರಗಳನ್ನು ವಿಮರ್ಶಿಸಬೇಕಾಗುತ್ತದೆ. ಬರವಣಿಗೆಯಲ್ಲಾದ ಒಪ್ಪಂದ ಅಥವಾ ಅನುಮತಿಯ ಶಬ್ದ ವಾಕ್ಯ ನಿಬಂಧನೆಗಳನ್ನು ಗಮನಿಸಬೇಕಾಗುತ್ತದೆ. ಇಂತಹ ದಾಖಲೆಗಳನ್ನು ಹೇಗೆ ವಿಮರ್ಶಿಸಬೇಕು ಮತ್ತು ಅರ್ಥೈಸಬೇಕು ಎಂಬ ಬಗ್ಗೆ ಬಹಳ ದೊಡ್ಡ ಚರ್ಚೆಗಳಾಗಿ ತೀರ್ಪುಗಳು ಬಂದಿವೆ.

ಇನ್ನು ನೊಂದಣಿಯ ವಿಚಾರವನ್ನು ಕಾನೂನು ಪ್ರಕಾರ ಗಮನಿಸುವುದು ಸೂಕ್ತ. 'ಕಾಪಿರೈಟಿನ ಒಪ್ಪಂದ' ಅಥವಾ 'ಕಾಪಿರೈಟಿನ ಅನುಮತಿ' (Assignment of copyright or copyright license) ಬರವಣಿಗೆಯಲ್ಲಿ ಇರಬೇಕೆಂಬುದು ಕಡ್ಡಾಯವೇ ಹೊರತು ನೊಂದಾವಣೆ ಕಡ್ಡಾಯವಲ್ಲ. ಇದು ವ್ಯಕ್ತಿಗತ ನಿರ್ಧಾರಕ್ಕೆ ಬಿಟ್ಟಿದೆ. ನೋಂದಾವಣೆ ಆದರೆ ಅದರದ್ದೆ ಆದ ಅನುಕೂಲಗಳು ಇವೆ. ಕಾನೂನು ಪ್ರಕಾರ ಹೆಚ್ಚು ವಿಸ್ವಾಸಾರ್ಹವಾಗಿರುತ್ತದೆ.

ಕಾಪಿರೈಟ್ ಕೂಡ ನೊಂದಾವಣೆ ಮಾಡಿಕೊಳ್ಳಬಲ್ಲಂತಹ ಹಕ್ಕು. ಆದರೆ ನೊಂದಾವಣೆ ಕಡ್ಡಾಯವಿಲ್ಲ. ಇದು ನೊಂದಾವಣೆ ಆದರೆ ಹೆಚ್ಚು ವಿಶ್ವಾಸಾರ್ಹವಾಗಿರುತ್ತದೆ. ನೊಂದಾವಣೆ ಆದ ಕಾಪಿರೈಟ್ ಮೇಲ್ನೋಟಕ್ಕೆ ನಂಬಲರ್ಹವಾದದ್ದು. ಇದಕ್ಕೆ ವ್ಯತಿರಿಕ್ತವಾಗಿ ವಿರೋಧ ಬಂದರೆ ಸ್ವತಂತ್ರ ಸಾಕ್ಷ್ಯಗಳ ಮೂಲಕ ಸಾಬೀತುಪಡಿಸಬೇಕು. ನೊಂದಾವಣೆ ಆಗದಿದ್ದರೆ ಕಾಪಿರೈಟಿನ ಹಕ್ಕು ಸ್ಥಾಪನೆಗೆ ಸ್ವತಂತ್ರರಾದ ನಂಬಲರ್ಹರಾದ ಸಾಕ್ಷಿಗಳನ್ನೊದಗಿಸಬೇಕು. ನೊಂದಾವಣೆ ಆದರೆ ತಗಾದೆ ಉಂಟಾದ ಸಂದರ್ಭದಲ್ಲಿ ಸಹಾಯವಾಗುತ್ತದೆ.

# ಪುಸ್ತಕೋದ್ಯಮ : ಒಂದು ಗಂಭೀರ ಚಿಂತನೆ



ಡಾ। ಎಸ್.ಆರ್. ರಾಮಸ್ವಾಮಿ

ಕಾಕತಾಳೀಯವಾಗಿ ಗುರುದೇವ ರವೀಂದ್ರನಾಥ ಠಾಕೂರರ ೧೫೦ನೇ ಜನ್ಮದಿನ ವರ್ಷದ ಸುಸಂದರ್ಭದಲಿ ನಾವೆಲ್ಲ ಸೇರಿದ್ದೇವೆ. ಈ ಹಿನ್ನೆಲೆಯಲ್ಲಿ ರವೀಂದ್ರನಾಥ ಠಾಕೂರರ ಅತ್ಯಂತ ಪ್ರಸಿದ್ಧವೂ ಪ್ರೇರಣಾದಾಯಕವೂ ಆದ ಪದ್ಯಪಂಕ್ತಿಗಳ ಸ್ಮರಣೆಯೊಡನೆ ನಮ್ಮ ಇವತ್ತಿನ ಕಲಾಪಗಳನ್ನು ಆರಂಭಿಸುವುದು ಸೂಕ್ತವೆನಿಸುತ್ತದೆ.

*Where the mind is without fear and the head is held high,Where knowledge is free, Where the world has not been broken up into fragments by narrow domesti walls, Wherere words come out from the depth of truth, Where tireless striving stretches its arms towards perfection, Where the clear stream of reason has not lost its way into the dreary desert sand of dead habit, Where the mind is led forward by Thee into ever-widening thought and action, Into that heaven of freedom, my Father, let my country awake.*

***- Rabindra Nath Tagore***

ಎಲ್ಲಿ ನಿರ್ಭಯ ಚಿತ್ತ
ಎಲ್ಲಿ ನಿರ್ಭಯಚಿತ್ತ ಉಚ್ಚ ಶಿರ ತಾನೆಲ್ಲಿ
ಎಲ್ಲಿ ಜ್ಞಾನದ ಮೌಲ್ಯ ಮುಕ್ತವಾಗಿಹುದೊ –
ಎಲ್ಲಿ ಸಂಕುಚಿತ ಗೃಹಭಿತ್ತಿಯಿಂದಲಿ ವಸುಧೆ
ತುಂಡಾಗಿಯೊಡೆದು ಹರಿಹಂಚಾಗದಿಹುದೊ –
ಎಲ್ಲಿ ಸತ್ಯದ ಆಳದಿಂದೊಗೆದ ಶಬ್ದಗಳು
ಹೃದಯದಿಂ ಹೊರಹೊಮ್ಮಿ ಪ್ರಕಟವಾಗುವವೊ –
ಎಲ್ಲಿ ಅವಿರತ ಕರ್ಮ ಸಾವಿರದ ಧಾರೆಯಲಿ
ದೇಶದೇಶಾಂತರದ ದಿಶೆದಿಶೆಗಳಲ್ಲಿ



ತನ್ನ ಕರಗಳ ಚಾಚಿ ಭ್ರಮಣ ಮಾಡುತ ಬಿಡದ
ಪೂರ್ಣತೆಯ ಪೊರೆಗಾಗಿ ಧಾವಿಸುತ್ತಿಹುದೊ –
ಎಲ್ಲಿ ಹಳೆ ಪದ್ಧತಿಯ ಹಾಳು ಮರುಭೂಮಿಯಲಿ
ಹರಿದ ಬುದ್ಧಿಯ ಶುದ್ಧ ತೊರೆ ಬತ್ತದಿಹುದೊ –
ಎಲ್ಲಿ ಪೌರುಷ ದಿನವು ನೂರಾರು ಬಗೆಯಲ್ಲಿ
ಖಂಡವಾಗದೆ ಭದ್ರವಾಗಿ ಹರಿದಿಹುದೊ –
ಎಲ್ಲಿ ಮನ ನಿನ್ನ ನೇತೃತ್ವದಲಿ ಸರ್ವದಾ
ಉದ್ಗಮ ವಿಚಾರದಲಿ ವಿಸ್ತರಿಸುತಿಹುದೊ –
– ಆ ಸ್ವರ್ಗ ಸ್ವಾತಂತ್ರ್ಯ ದರ್ಶನದಿ ತಾಯ್ನಾಡ
ಹೊಡೆದೆಬ್ಬಿಸೆಲೆ ತಂದೆ, ನಿನ್ನ ಕೈಯಿಂದೆ!

(ಅನುವಾದ: ಸ.ಪ. ಗಾಂವಕಾರ)

'ಪುಸ್ತಕ ದಿನ ನಿಮಿತ್ತವಾಗಿ ನಾವೆಲ್ಲ ಸೇರಿರುವುದರಿಂದ, ಪುಸ್ತಕೋದ್ಯಮವನ್ನೇ ಕುರಿತು ಒಂದೆರಡು ಅನಿಸಿಕೆಗಳನ್ನು ನಿವೇದಿಸಿದರೆ ಈ ಸಂದರ್ಭಕ್ಕೆ ಪರ್ಯಾಪ್ತವಾದೀತು. ಇಲ್ಲಿ ಸೇರಿರುವ ನಾವೆಲ್ಲ ಪುಸ್ತಕಸಂಸ್ಕೃತಿಯ ಜೊತೆಗೆ ಹೊಕ್ಕುಳಬಳ್ಳಿಯ ಸಂಬಂಧ ಇಟ್ಟುಕೊಂಡಿರುವವರು. ನಮ್ಮ ವೃತ್ತಿ, ಪ್ರವೃತ್ತಿ - ಎಲ್ಲವೂ ಪುಸ್ತಕೋದ್ಯಮವೇ ಆಗಿದೆ. ವರ್ಷದ ಪ್ರತಿ ದಿನವೂ ನಮ್ಮ ಪಾಲಿಗೆ 'ಪುಸ್ತಕ ದಿನವೇ ಆಗಿದೆ. ಆದರೂ ಯಾವುದೋ ಪರಿಗಣನೆಯಿಂದ ವರ್ಷದ ಒಂದು ದಿನವನ್ನು 'ಪುಸ್ತಕ ದಿನ ಎಂದು ಸಂಕೇತಿಸಿದ್ದಾರೆ. ಷೇಕ್‌ಸ್ಪಿಯರನ ಜನ್ಮದಿನವೆಂಬುದು ಈ ಅಂಕಿತಕ್ಕೆ ನಿಮಿತ್ತವಾಗಿದೆ. ಆ ನೆವದಲ್ಲಿ ಸಮಾನಮನಸ್ಕರಾದ ನಾವೆಲ್ಲ ಸೇರಿ ಒಂದಷ್ಟು ಚಿಂತನೆಗಳನ್ನು ಹಂಚಿಕೊಳ್ಳುವುದಕ್ಕೆ ಅಭ್ಯಂತರವೇನಿಲ್ಲ.

ಚಿಂತನಶೀಲರ ಧ್ಯಾನದಿಂದ ಹೊಮ್ಮುವ ವಿಚಾರರಾಶಿಗಳು ಎಷ್ಟು ತೇಜೋಮಯವಾದವೆಂದರೆ ಅವು ಜಲಪಾತದಂತೆ ಅಥವಾ ಚಕ್ರವಾತದಂತೆ, ಯುದ್ಧಾಶ್ವದಂತೆ ಮುನ್ನುಗ್ಗಿ ದಶದಿಕ್ಕುಗಳಲ್ಲಿ ಹರಡುತ್ತವೆ - ಎಂದು ವಾಕ್ಕಿನ ಮಹತ್ತ್ವವನ್ನು ಋಗ್ವೇದ ಕೀರ್ತಿಸಿದೆ. ಅದರ ನಾಲ್ಕನೇ ಮಂಡಲದ ಅಂತ್ಯದ ಒಂದು ಇಡೀ ಸೂಕ್ತವೇ ವಾಕ್ಕಿನ ಮಹಿಮೆಯ ಸ್ತವನಕ್ಕೆ ಮೀಸಲಾಗಿದೆ.

೧೯೪೦ರ ಆರಂಭದಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದಲ್ಲಿ ಮಾಡಿದ ಒಂದು ಭಾಷಣದಲ್ಲಿ ಡಿ.ವಿ.ಜಿ. ಹೀಗೆಂದಿದ್ದರು:

"ಸಾಹಿತ್ಯವು ದುಃಖವನ್ನು ಮರೆಯಿಸಿ ನಮ್ಮನ್ನು ನಗಿಸಲೂ ಬಲ್ಲುದು; ಅಳು-ನಗುಗಳೆರಡಕ್ಕಿಂತ ಮೇಲ್ಮಟ್ಟಕ್ಕೆ ನಮ್ಮನ್ನೊಯ್ದು ಸಮಾಧಾನಪಡಿಸಲೂ ಬಲ್ಲುದು. ಮನಸ್ಸನ್ನು ಪರಿಪಕ್ವಗೊಳಿಸಿ ಆತ್ಮವನ್ನು ದೃಢಪಡಿಸುವ ಉದಾತ್ತ ದರ್ಶನವನ್ನು ಒಳಗೊಂಡಿರುವುದೇ ಶ್ರೇಷ್ಠಸಾಹಿತ್ಯ.

ಅದೇ ಭಾವನೆಯನ್ನು ಲಾರ್ಡ್ ಮಾರ್ಲೆಯ ಪ್ರಸಿದ್ಧ ಉಕ್ತಿಯೂ ಬಿಂಬಿಸಿದೆ:
"ಸದ್ಗುಣವಂತರಾದ ಜನರನ್ನು ರೂಪಿಸುವುದಕ್ಕೆ ಲಭ್ಯವಿರುವ ಅತ್ಯಂತ ಪ್ರಬಲ ಸಾಧನವೆಂದರೆ ಸಾಹಿತ್ಯವೇ.
("Literature is ... one of the most powerful instruments for forming character.")
ಎಷ್ಟು ಸುತ್ತಿ ಬಳಸಿ ಹೇಳಿದರೂ ಸಾರತತ್ತ್ವ ಇಷ್ಟೇ.
ಜನರಿಗೆ ಜೀವನಸೌಂದರ್ಯದ ದರ್ಶನ ಮಾಡಿಸುವುದು ಸಾಹಿತ್ಯ. ಈ ದಿವ್ಯಸನ್ನಿಧಿಯ ಪ್ರಸಾದ ಅನಕ್ಷರಸ್ಥರೂ ಸೇರಿದಂತೆ ಎಲ್ಲರಿಗೂ ಲಭ್ಯ. ಅದಕ್ಕಾಗಿ ನಾವು ಕೈಯನ್ನು ಚಾಚಬೇಕಷ್ಟೆ.

ಸಾಹಿತ್ಯದಿಂದ ಗರಿಷ್ಠ ಪ್ರಯೋಜನ ಲಭಿಸಬೇಕಾದರೆ ಅದರ ಬಗೆಗೆ ನಮ್ಮಲ್ಲಿ ಆರಾಧನಾಭಾವ ಇರಬೇಕು. ಪೂಜೆಯ ಸಂದರ್ಭದಲ್ಲಿ ಭಕ್ತಿಯನ್ನು ಪ್ರಕಟಿಸುತ್ತೇವೆ. ಧಾರ್ಮಿಕ ಪ್ರವೃತ್ತಿಯವರು ಭೋಜನಪೂರ್ವದಲ್ಲಿಯೂ ಅದು ಭಗವತ್ ಪ್ರಸಾದವೆಂದು ದೈವಸ್ಮರಣೆ ಮಾಡುತ್ತಾರೆ. ಇಂತಹದೇ ಪವಿತ್ರ ಭಾವನೆ ಸಾಹಿತ್ಯಾಭ್ಯಾಸಕ್ಕೂ ಸಲ್ಲುತ್ತದೆ.

ಸಾಹಿತ್ಯವನ್ನು ಆಸ್ವಾದಿಸಿ ಆನಂದವನ್ನು ಪಡೆಯುವ ಓದುಗ ಮಾಡುವುದೂ ಭಾಷಾಸೇವೆಯೇ. ಹೀಗೆ ಲೇಖಕನಂತೆ ಓದುಗನೂ ಸಂಮಾನಕ್ಕೆ ಅರ್ಹನಾದವನು - ಎಂದು ನಾವು ಗ್ರಹಿಸಬೇಕು.

ಇಲ್ಲಿ ಸೇರಿರುವಂತಹವರಿಗೆ ಸಾಹಿತ್ಯದ ಅಥವಾ ಪುಸ್ತಕಸಂಸ್ಕೃತಿಯ ಮಹತ್ತ್ವವನ್ನು ನೆನಪು ಮಾಡಿಕೊಡುವ ಅಗತ್ಯ ಸುತರಾಂ ಇಲ್ಲ.

ಪುಸ್ತಕಗಳು ಕೇವಲ 'ಟೈಂ ಪಾಸ್' ಉದ್ದೇಶದವಲ್ಲ. ಮನರಂಜನೆಗೆಂದೇ ರಚಿತವಾಗುವ ಸಾಹಿತ್ಯ ಒಂದಷ್ಟು ಇರುತ್ತದೆ; ಅದಕ್ಕೆ ಆಕ್ಷೇಪಿಸಬೇಕಾದುದೇನಿಲ್ಲ. ಆದರೆ ಸಮಾಜದ ಪ್ರಗತಿಯ ಸಾಧನೆಯಲ್ಲಿ ಪುಸ್ತಕಗಳ ಪಾತ್ರ ಮಹತ್ತ್ವದ್ದಿದೆ ಎಂಬುದನ್ನು ಮರೆಯಬಾರದು. ಸಾಹಿತ್ಯಕೃತಿಗಳು ಇತಿಹಾಸದಲ್ಲೇ ತಿರುವನ್ನು ತಂದ ನಿದರ್ಶನಗಳು ಇವೆ. ನವೋತ್ಥಾನ ಶಿಲ್ಪಿಗಳಿಗೂ ರಾಷ್ಟ್ರನಿರ್ಮಾಪಕರಿಗೂ ಮುಖ್ಯ ಅವಲಂಬವನ್ನು ಒದಗಿಸಿದುದು ಪುಸ್ತಕಮಾಧ್ಯಮವೇ. ಹಲವು ವೈಚಾರಿಕ ಕ್ರಾಂತಿಗಳನ್ನು ಶಕ್ಯವಾಗಿಸಿದುದೂ ಪುಸ್ತಕಮಾಧ್ಯಮವೇ. ಈ ಕಾರಣಗಳಿಂದ ಪುಸ್ತಕೋದ್ಯಮದ ಸಮೃದ್ಧಿಯು ಸಮಾಜದ ಸ್ವಾಸ್ಥ್ಯಕ್ಕೆ ಅತ್ಯಂತ ಆವಶ್ಯಕ. ಎಷ್ಟೇ ಶ್ರೇಷ್ಠ ಚಿಂತನೆಗಳು ಲೇಖಕರ ಪ್ರತಿಭೆಯಿಂದ ಹೊಮ್ಮಿದರೂ ಅವುಗಳ ವ್ಯಾಪಕ ಪ್ರಸಾರ ಆಗಬಹುದಾದದ್ದು ಪ್ರಕಾಶನಮಾಧ್ಯಮದ ಮೂಲಕವೇ.

ಏನು ಬೇಕಾದರೂ ಓದಲು ಮುದ್ರಿತ ರೂಪದಲ್ಲಿ ಸಿಗುತ್ತಿರುವ ಈ ಕಾಲದ ನಾವು ಅದೃಷ್ಟಶಾಲಿಗಳು. ಕನ್ನಡದ ಅತ್ಯಂತ ಮಹತ್ತ್ವದ ಕೃತಿಗಳೂ ಜನಸಾಮಾನ್ಯರ ಕೈಗಳಿಗೆ ಎಟುಕತೊಡಗಿದ್ದು ಕಳೆದ ೧೩೦-೧೪೦ ವರ್ಷಗಳಿಂದ ಈಚೆಗಷ್ಟೆ. ಅದಕ್ಕೆ ಹಿಂದೆ ಕುಮಾರವ್ಯಾಸ ಭಾರತದಂತಹ ಕೃತಿಯನ್ನು ಬಳಸಬೇಕಾದವರೂ ಯಾವುದೋ ವಿರಳ ಕಲ್ಲಚ್ಚಿನ ಪ್ರತಿಯನ್ನೋ ಕೈಬರಹದ ಪ್ರತಿಗಳನ್ನೋ ಅವಲಂಬಿಸಬೇಕಾಗಿತ್ತು. ಭಾರತೀಯ ಭಾಷೆಗಳಲ್ಲಿ ಈ ಮುದ್ರಣಕ್ರಾಂತಿ ನಡೆಯತೊಡಗಿದ್ದು ೧೯ನೇ ಶತಮಾನದ ಮಧ್ಯಭಾಗದ ಕಾಲದಿಂದಷ್ಟೆ.

ವಾವಿಳ್ಳ ರಾಮಸ್ವಾಮಿಶಾಸ್ತ್ರಿಗಳ ಪ್ರಕಾಶನಸಂಸ್ಥೆಯು ಮೊತ್ತಮೊದಲಬಾರಿಗೆ ರಾಮಾಯಣ-ಮಹಾಭಾರತಗಳ ಜನಪ್ರಿಯ ಆವೃತ್ತಿಯನ್ನು ತೆಲುಗು ಲಿಪಿಯಲ್ಲಿ ೧೮೫೬ರಲ್ಲಿ ಹೊರತಂದಾಗ ಅದು ಎಂತಹ ಅಭೂತಪೂರ್ವ ಘಟನೆ ಆಗಿದ್ದಿತೆಂದರೆ ಆ ಗ್ರಂಥಗಳನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿ ವಾಲಗ ಬಾಜಾಬಜಂತ್ರಿಗಳ ಸಮೇತ ಮದರಾಸಿನ ರಾಜಬೀದಿಗಳಲ್ಲಿ ಊರಿನ ಮೇಯರ್ ಮೊದಲಾದ ಪ್ರಮುಖರೆಲ್ಲ ಸೇರಿ ಮೆರವಣಿಗೆ ಮಾಡಿದ್ದರು.

ಪಾಶ್ಚಾತ್ಯ ದೇಶಗಳಲ್ಲಿ ಇರುವ ಹಾಗೆ ಗ್ರಂಥಪ್ರಕಾಶನವನ್ನು ಒಂದು ವ್ಯಾಪಾರಿ ಉದ್ಯಮವಾಗಿ ನಡೆಸುವ ಪದ್ಧತಿ ಭಾರತದಲ್ಲಿ ಈಗ್ಗೆ ನೂರು ವರ್ಷ ಹಿಂದೆ ಇರಲಿಲ್ಲ. ಅಲ್ಲದೆ ೨೦ನೇ ಶತಮಾನದ ಮೊದಲ ದಶಕಗಳಲ್ಲಿ ಪ್ರಕಾಶನಕಾರ್ಯ ಬ್ರಿಟಿಷ್ ಪ್ರಭುತ್ವದ ಹದ್ದುಗಣ್ಣಿನ ಉಸ್ತುವಾರಿಗೆ ಒಳಪಟ್ಟಿತ್ತು. ಅನೇಕ ಪ್ರಕಾಶಕರು ಬಂಧನಕ್ಕೆ ಒಳಗಾಗಿದ್ದರು. ಅನೇಕ ಮುದ್ರಣಾಲಯಗಳು ಜಪ್ತು ಆಗಿದ್ದವು. ಅಂತಹ ವಿಷಮ ಪರಿಸ್ಥಿತಿಯಲ್ಲಿಯೂ ಪ್ರಕಾಶನವನ್ನು ಜನಜಾಗೃತಿಯ ಮಾಧ್ಯಮವನ್ನಾಗಿ ಬಳಸಿದವರು ಹತ್ತಾರು ಮಂದಿ.

ಇದರ ಜೊತೆಗೆ ತಾಂತ್ರಿಕ ಕ್ಲೇಶಗಳೂ ಇದ್ದವು. ಇಲ್ಲಿ ಲಭ್ಯವಾಗಿದ್ದವು ಆದ್ಯಯುಗದ ಮುದ್ರಣಯಂತ್ರಗಳು – ಅದೂ 'ಸೆಕಂಡ್ ಹ್ಯಾಂಡ್'ಯಂತ್ರಗಳು. ಗುಣಮಟ್ಟದ ಕಾಗದದ ವಿಷಯ ಹಾಗಿರಲಿ; ಯಾವುದೇ ಮಟ್ಟದ ಮುದ್ರಣಕಾಗದ ದೊಡ್ಡ ಪ್ರಮಾಣದಲ್ಲಿ ಸಿಗುತ್ತಿರಲಿಲ್ಲ. ಹೀಗೆ ಶ್ರೇಷ್ಠ ಕೃತಿಗಳೂ ಅಲ್ಪಪ್ರಮಾಣದಲ್ಲಷ್ಟೆ - ಅದೂ ಬಹುಮಟ್ಟಿಗೆ

ಕತ್ತೆಕಾಗದದಲ್ಲಿ ಮುದ್ರಣವಾಗುತ್ತಿದ್ದವು. (ಈಗಿನವರಿಗೆ ಈ ಶಬ್ದ ಪ್ರಯೋಗ ಪರಿಚಯವಿರಲಾರದು. 'ಕತ್ತೆಕಾಗದ ಎಂದರೆ ಒರಟು unbleached ಕಾಗದ – ಬಫ್ ಪೇಪರ್. ಸರ್ಕಾರದ ಸಮಸ್ತ ವ್ಯವಹಾರಗಳೂ ಈ ಕಾಗದದಿಂದಲೇ ನಡೆಯುತ್ತಿದ್ದುದು).

ಈ ಸ್ಥಿತಿಯು ಸುಧಾರಿಸತೊಡಗಿದ್ದು ೧೯೪೦ರ ದಶಕದ ನಂತರವೇ.

ಹೀಗೆಂದರೆ ಪ್ರಕಾಶನೋದ್ಯಮ ಇರಲಿಲ್ಲವೆಂದಲ್ಲ. ದೇಶಾದ್ಯಂತ ಸಾಹಸಿಗಳು ಪುಸ್ತಕಗಳನ್ನು ಹೊರಹಾಕುತ್ತಲೇ ಇದ್ದರು. ಅವುಗಳಲ್ಲಿ 'ಜನರಲ್ ಲಿಟರೇಚರ್ ವರ್ಗಕ್ಕೆ ಸೇರಿದಂತಹವು ಇಡೀ ದೇಶದಲ್ಲಿ ಹಲವು ನೂರಕ್ಕೆ ಹೆಚ್ಚು ಇರಲಿಲ್ಲ.

ದೇಶದ ಸ್ವಾತಂತ್ರ ್ಯಪ್ರಾಪ್ತಿಯ ಕಾಲಕ್ಕೆ ಮುದ್ರಣೋದ್ಯಮ, ಪ್ರಕಾಶನೋದ್ಯಮ, ಕಾಗದ ತಯಾರಿಕೆ ಉದ್ಯಮ - ಎಲ್ಲವೂ ಏಕಕಾಲದಲ್ಲಿ ಬೆಳೆಯತೊಡಗಿದವು.

ಕಳೆದ ಎಪ್ಪತ್ತೆಂಬತ್ತು ವರ್ಷಗಳಲ್ಲಿ ನಮ್ಮ ಪ್ರಕಾಶನೋದ್ಯಮ ಸತತವಾಗಿ ಬೆಳೆಯುತ್ತಾ ಬಂದಿರುವುದನ್ನು ಪ್ರಜಾಪ್ರಭುತ್ವಾನುಗುಣ ಜ್ಞಾನವಿಕೇಂದ್ರೀಕರಣದ ಸೂಚಕವೆಂದೂ ಭಾವಿಸಬಹುದು.

ಪ್ರಕಾಶನಸ್ವಾತಂತ್ರ್ಯ, ಲೇಖನಸ್ವಾತಂತ್ರ್ಯ, ವಾಚನಸ್ವಾತಂತ್ರ್ಯ - ಈ ಮೂರು ಎಲ್ಲರ ಮೂಲಭೂತ ಹಕ್ಕುಗಳು - ಎಂದು UNESCOದ `Charter of the Book ಘೋಷಣೆ ಮಾಡಿತ್ತು. ಕೆಲವು ವಿರಳ ಪ್ರಸಂಗಗಳನ್ನು ಹೊರತುಪಡಿಸಿದರೆ ಈ ಹಕ್ಕುಗಳ ಕಾರ್ಯಾನ್ವಯ ಬಹುಮಟ್ಟಿಗೆ ಅಬಾಧಿತವಾಗಿ ನಡೆದಿದೆ.

ಪ್ರಕಾಶಕರೆಂದರೆ ಕೇವಲ ಮಾರಾಟಗಾರರಲ್ಲ. ಭಾಷೆ-ಸಾಹಿತ್ಯಗಳನ್ನು ಹೆಚ್ಚು ಸತ್ತ್ವಯುತಗೊಳಿಸಬೇಕಾದವರು ಪ್ರಕಾಶಕರು ಮತ್ತು ಲೇಖಕರು.

ಸಾಕ್ಷರತೆಯ ಪ್ರಸಾರದಲ್ಲಿಯೂ ಪ್ರಕಾಶನೋದ್ಯಮ ಹೆಚ್ಚು ಸಕ್ರಿಯವಾಗಿ ತೊಡಗಿಕೊಳ್ಳಬೇಕಾಗಿದೆ.

ಅಮೆರಿಕದಲ್ಲಿ ಪ್ರಕಟಗೊಳ್ಳುವ ಕೃತಿಗಳಲ್ಲಿ ವಿಜ್ಞಾನಸಂಬಂಧಿತ ಕೃತಿಗಳು ಶೇ. ೨೫ರಷ್ಟು ಅಧಿಕವಾಗಿವೆ. ಭಾರತದಲ್ಲಿ ಇದರ ಪ್ರಮಾಣ ಶೇ. ೧೦ಕ್ಕೂ ಕಡಮೆ ಮತ್ತು ಅದೂ ಬಹುಮಟ್ಟಿಗೆ ಇಂಗ್ಲಿಷಿನಲ್ಲಿ.

ಭಾರತ ವಿಸ್ತೀರ್ಣದಲ್ಲಿ ಹತ್ತಿರಹತ್ತಿರ ಯೂರೋಪಿನಷ್ಟು ಇದೆ. ಯೂರೋಪಿನಲ್ಲಿ ಪ್ರಮುಖವಾಗಿ ೨೨ ಭಾಷೆಗಳು ಇವೆ. ಭಾರತದಲ್ಲಿ ಪ್ರಮುಖವಾಗಿ ೧೮ ಭಾಷೆಗಳು ಇವೆ. ಹೀಗೆ ಪ್ರಕಟಣೋದ್ಯಮದ ವೃದ್ಧಿಗೆ ಹೇರಳ ಅವಕಾಶ ಇದೆ.

ಫ್ರಾನ್ಸ್, ಸ್ಪೇಯ್ನ್, ಜಪಾನ್ - ಇವು ಗಾತ್ರದಲ್ಲಿ ದೊಡ್ಡ ದೇಶಗಳೇನಲ್ಲ. ಆದರೆ ಈ ಒಂದೊಂದು ದೇಶದಲ್ಲಿಯೂ ಪ್ರತಿವರ್ಷ ೫೦,೦೦೦ದಷ್ಟು ಗ್ರಂಥಗಳು ಪ್ರಕಟವಾಗುತ್ತವೆ. ಭಾರತದಂತಹ ದೊಡ್ಡ ದೇಶದಲ್ಲಿ ಪ್ರತಿವರ್ಷ ಪ್ರಕಾಶನಗೊಳ್ಳುತ್ತಿರುವ ಪುಸ್ತಕಗಳ ಪ್ರಮಾಣ ಸುಮಾರು ೭೦,೦೦೦ದಷ್ಟು.

ಜನಜಾಗೃತಿಯ ಮತ್ತು ಜನಶಿಕ್ಷಣದ ಪ್ರಮುಖ ಮಾಧ್ಯಮವೆಂದರೆ ಪುಸ್ತಕಗಳೇ ಆಗಿವೆ. ಇದನ್ನು ಪರಿಗಣಿಸಿ ಸರ್ಕಾರವು ಗ್ರಂಥಪ್ರಕಟಣೋದ್ಯಮಕ್ಕೆ ಹೆಚ್ಚಿನ ಸವಲತ್ತುಗಳನ್ನು ನೀಡಬೇಕಾದುದು ಅವಶ್ಯವಿದೆ.

ಭಾರತದಲ್ಲಿ ಪ್ರಕಟಗೊಳ್ಳುತ್ತಿರುವ ಪುಸ್ತಕಗಳಲ್ಲಿ ಸುಮಾರು ಶೇ. ೨೫ರಷ್ಟು ಹಿಂದೀ ಭಾಷೆಯವು. ಇಂಗ್ಲಿಷ್ ಆದರಿಂದ ಎರಡನೇ ಸ್ಥಾನದಲ್ಲಿ ಇದೆ. ಇಂಗ್ಲಿಷಿಗೆ ಹೀಗೆ ಹೆಚ್ಚಿನ ಸ್ಥಾನಮಾನ ತಂದುಕೊಟ್ಟಿರುವುದು ಪ್ರಚಲಿತ ಶಿಕ್ಷಣವ್ಯವಸ್ಥೆ.

ವಿದೇಶಗಳಿಗೆ ರಫ್ತಾಗುವ ಪುಸ್ತಕಗಳಲ್ಲಿ ಹೆಚ್ಚಿನವು ಇಂಗ್ಲಿಷಿನವು.

ಒಟ್ಟು ಭಾರತೀಯ ಪ್ರಕಟಣೆಗಳಲ್ಲಿ ಇಂಗ್ಲಿಷ್ ಭಾಷೆಯ ಕೃತಿಗಳ ಪ್ರಮಾಣ ಕಳೆದ ೧೫-೨೦ ವರ್ಷಗಳಲ್ಲಿ ಕಡಮೆಯಾಗುತ್ತ ಬಂದಿದೆ. ಇದು ಒಂದು ವೈಚಿತ್ರ್ಯ. ಏಕೆಂದರೆ ಇಂಗ್ಲಿಷ್ ಭಾಷೆಗೆ ಎಲ್ಲ ಸೌಲಭ್ಯಗಳೂ ಭಾರತೀಯ ಭಾಷೆಗಳಿಗಿಂತ ಹೆಚ್ಚು ಇವೆ.

ಕೆಲವರ ದೃಷ್ಟಿಯಲ್ಲಿ ಶುದ್ಧ ಸಾಹಿತ್ಯ ಪ್ರಕಾರಕ್ಕೆ ಸೇರದ ಧಾರ್ಮಿಕ-ಪಾರಮಾರ್ಥಿಕ ಪುಸ್ತಕಗಳು ಭಾರತದಲ್ಲಿ ವರ್ಷಕ್ಕೆ ಹನ್ನೆರಡರಿಂದ ಹದಿನೈದು ಸಾವಿರದಷ್ಟು ಪ್ರಕಟವಾಗುತ್ತವೆ. ಮಿಕ್ಕೆಲ್ಲ ಪ್ರಕಾರಗಳಿಗಿಂತ ಅತ್ಯಧಿಕವಾಗಿ ಮಾರಾಟವಾಗುವವು ಈ ವರ್ಗದ ಪುಸ್ತಕಗಳು. ಆದರೆ ಇವುಗಳಲ್ಲಿ ಹೆಚ್ಚಿನವು ನಮ್ಮ ಪ್ರಕಟಣೋದ್ಯಮ ಕಕ್ಷೆಯಿಂದ ಹೊರಗೇ ಉಳಿಯುತ್ತವೆ.

ರಸ್ತೆಬದಿಗಳಲ್ಲಿ ಸತತವಾಗಿ ಮಾರಾಟವಾಗುವ ಹೊಸ ಹಾಗೂ ಹಳೆಯ ಪುಸ್ತಕಗಳು ಎಷ್ಟೆಂದು ಯಾರು ಲೆಕ್ಕಮಾಡಿದ್ದಾರೆ?
ಈ ಅಂಶಗಳನ್ನೆಲ್ಲ ಕುರಿತು ಯೋಚಿಸುವಾಗ - ಗ್ರಂಥ ಪ್ರಕಟಣೋದ್ಯಮ ನಾವು ಭಾವಿಸಿರುವುದಕ್ಕಿಂತ ಅತ್ಯಂತ ವಿಶಾಲವಾದುದು ಎಂಬುದು ಸ್ಪಷ್ಟವಾಗುತ್ತದೆ.

ಪಾಠ್ಯಪುಸ್ತಕಗಳ ಪ್ರಕಾಶನ ಮೊದಲಾದವೆಲ್ಲ ಮುಖ್ಯವೇ ಆಗಿದ್ದರೂ ಪ್ರಸ್ತುತಕ್ಕೆ ಪಾಠ್ಯೇತರ ಸಾಹಿತ್ಯವನ್ನು ಕುರಿತು ಯೋಚಿಸೋಣ. ಕಾನೂನು–ಸಂಬಂಧಿತ ಪ್ರಕಟಣೆಗಳು ಮೊದಲಾದ ಕ್ಷೇತ್ರಗಳನ್ನೂ ಇಲ್ಲಿ ನಮ್ಮ ಕಕ್ಷೆಯಿಂದ ಹೊರಗಿರಿಸಬೇಕಾಗಿದೆ.

ಕನ್ನಡ ಪುಸ್ತಕೋದ್ಯಮ ಈಚಿನ ವರ್ಷಗಳಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದರೂ ಮರಾಠಿ, ತಮಿಳು, ತೆಲುಗು ಭಾಷೆಗಳಿಗಿಂತ ನಾವು ಹಿಂದೆ ಇದ್ದೇವೆ. ಹಿಂದೀ ಪ್ರಕಟಣೋದ್ಯಮವಂತೂ ಇಂಗ್ಲಿಷ್ ಮಾರುಕಟ್ಟೆಯನ್ನೂ ಮೀರಿಸಿದೆ. ಸಂಖ್ಯಾಪ್ರಮಾಣದ ವಿಷಯ ಹೀಗಿದ್ದರೂ, ಗಂಭೀರವಿಷಯಕ ಕೃತಿಗಳು ಹಿಂದೀ ಭಾಷೆಗಿಂತ ಮರಾಠಿ ತೆಲುಗು ಮೊದಲಾದ ಭಾಷೆಗಳಲ್ಲಿ ಅಧಿಕವಾಗಿವೆ.

ಕಡಮೆ ಬೆಲೆಯ ಪೇಪರ್‌ಬ್ಯಾಕ್ ಪ್ರಕಟಣೆಗಳಲ್ಲಿ ಹಿಂದೀ ಭಾಷೆ ಮುಂದಿದೆ.

ಪ್ರಕಾಶನೋದ್ಯಮವನ್ನು ಕುರಿತು ಯೋಚಿಸುವಾಗ ಬಹುಮಟ್ಟಿಗೆ ಇಂಗ್ಲಿಷ್ ಭಾಷೆಯ ಕೃತಿಗಳ ಪ್ರಸಾರವನ್ನು ಪರಿಗಣಿಸುವುದು ಹಳೆಯ ರೂಢಿ. ವಸ್ತುಸ್ಥಿತಿಯೆಂದರೆ ಭಾರತದ ಒಟ್ಟು ಪ್ರಕಟಣೆಗಳಲ್ಲಿ ಇಂಗ್ಲಿಷ್ ಭಾಷೆಯವು ಶೇ. ೧೫ರಿಂದ ೨೦ರಷ್ಟು ಮಾತ್ರ. ಹೀಗಿದ್ದೂ ಅಂತರರಾಷ್ಟ್ರೀಯ ಪ್ರಕಟಣೋದ್ಯಮ ವೇದಿಕೆಗಳಲ್ಲಿ ಭಾರತೀಯ ಭಾಷೆಗಳ ಪ್ರಕಟಣೆಗಳ ಪ್ರಸ್ತಾವ ಇರುವುದು ಕಡಮೆ.



ಇದರಿಂದ ನಮಗೆ ಆದ ನಷ್ಟವೇನೂ ಇಲ್ಲವೆಂದುಕೊಂಡರೂ, ನಮ್ಮ ದೇಶದವರಿಗಾದರೂ ಸರಿಯಾದ ಮಾಹಿತಿ ಇರುವುದು ಅಪೇಕ್ಷಣೀಯ.

ಖಚಿತವಾದ ಮಾಹಿತಿಯ ಕೊರತೆಯನ್ನು ಕುರಿತು ಹೇಳಲೇಬೇಕಾಗಿದೆ. ದೇಶದಲ್ಲಿ ಪ್ರಕಟಗೊಂಡ ಯಾವುದೇ ಪುಸ್ತಕದ ಒಂದು ಪ್ರತಿಯನ್ನು ಕಲ್ಕತ್ತಾದ National Bibliography ಗೆ ಕಳುಹಿಸುವುದು ಕಾನೂನಿನಂತೆ ಕಡ್ಡಾಯ. 'The Delivery of Books Act' ಶಾಸನವೂ ೧೯೫೪ ರಷ್ಟು ಹಿಂದಿನಿಂದಲೇ ಜಾರಿಯಲ್ಲಿದೆ. ಆದರೆ ಈ ಕಾನೂನಿನ ಅಸ್ತಿತ್ವವೇ ತಿಳಿಯದ ಪ್ರಕಾಶಕರ ಸಂಖ್ಯೆಯೇ ಬಹುಶಃ ಅಧಿಕವಾಗಿರಬಹುದು. ಈ ಕಾನೂನಿನ ಉಪಯುಕ್ತತೆಯ ಬಗೆಗೆ ಜಾಗೃತಿಯನ್ನು ಹರಡುವ ಕೆಲಸವನ್ನು ಪ್ರಕಾಶಕರ ಸಂಘ ಮತ್ತು ಇತರ ವೇದಿಕೆಗಳು ಇನ್ನೂ ಹೆಚ್ಚು ವ್ಯಾಪಕವಾಗಿ ಮಾಡಬೇಕಾಗಿದೆ. Federation of Indian Publishers ಒಕ್ಕೂಟ ಅನೇಕ ವರ್ಷಗಳ ಹಿಂದಿನಿಂದ ಈ ದಿಕ್ಕಿನಲ್ಲಿ ಒಂದಷ್ಟು ಶ್ರಮಿಸಿದೆ.

ಇದೀಗ ಕನ್ನಡದಲ್ಲಿ ಪ್ರತಿವರ್ಷ ಮೂರರಿಂದ ನಾಲ್ಕು ಸಾವಿರದಷ್ಟು ಪುಸ್ತಕಗಳು ಪ್ರಕಟಗೊಳ್ಳುತ್ತಿವೆ. ಈಚೆಗೂ ಮತ್ತು ಹಿಂದಿನ ವರ್ಷಗಳಲ್ಲಿಯೂ ಪ್ರಕಟಗೊಂಡಿರುವ ಅಷ್ಟೂ ಪುಸ್ತಕಗಳ ಮಾಹಿತಿ ಎಲ್ಲಿಯಾದರೂ ಒಂದೇ ಕಡೆ ದೊರೆಯಬೇಡವೆ? ಇದು ವಾಚಕರಿಗೆ ಅತ್ಯಂತ ಉಪಯುಕ್ತವೆಂಬುದು ಸ್ಪಷ್ಟವೇ ಆಗಿದೆ. ಸಂಶೋಧಕರಿಗಂತೂ ಇಂತಹ ಪರಿಕರ ಅನಿವಾರ್ಯವಾಗುತ್ತದೆ. ಈ ದಿಕ್ಕಿನಲ್ಲಿ ಶ್ಲಾಘನೀಯ ಕಾರ್ಯ ಮಾಡಿದ ಮೈಸೂರು ವಿಶ್ವವಿದ್ಯಾಲಯದ 'ಗ್ರಂಥಸೂಚಿ ಸಂಪುಟಸರಣಿಯ ಪ್ರಕಟಣೆ ಎಷ್ಟೋ ವರ್ಷ ಹಿಂದೆ ನಿಂತಿದೆ. ಈಗ ಲಭ್ಯವಿರದಿದ್ದಲ್ಲಿ ಹಿಂದಿನ ಆ ಸಂಪುಟಗಳನ್ನು ಸಿ.ಡಿ. ರೂಪದಲ್ಲಿ ಲಭ್ಯವಾಗಿಸುವುದು ಮತ್ತು ಕಳೆದ ಇಪ್ಪತ್ತು-ಮೂವತ್ತು ವರ್ಷಗಳ ಕನ್ನಡ ಪ್ರಕಟಣೆಗಳ ಅಂತಹ ಕ್ರೋಢೀಕೃತ ಕೋಶಗಳು ಸಿದ್ಧಗೊಂಡು ಪ್ರಕಟಗೊಳ್ಳುವುದು ತುಂಬಾ ಅಪೇಕ್ಷಣೀಯ. ಹಿಂದೆ ಇರದಿದ್ದ ಕಂಪ್ಯೂಟರ್ ಯಂತ್ರಸೌಲಭ್ಯ ಈಗ ಇರುವುದರಿಂದ ಹಿಂದಿನಷ್ಟು ಶ್ರಮ ಆಗಲಾರದು. ಪ್ರತಿ ಜಿಲ್ಲೆಯಲ್ಲಿ ಒಂದು ಮಾಹಿತಿಕೇಂದ್ರವನ್ನು ಏರ್ಪಡಿಸಿ ಅವುಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಬಹುದು. ಒಂದಷ್ಟು ನ್ಯೂನತೆಗಳು ಇದ್ದರೂ ಚಿಂತೆಯಿಲ್ಲ, ಆದಷ್ಟುಮಟ್ಟಿನ ಮಾಹಿತಿಯನ್ನು ಸಂಕಲನ ಮಾಡಿ ಪ್ರಕಟಿಸುವ ಪ್ರಯತ್ನ ನಡೆಯಬೇಕು.

ಪ್ರಕಾಶಕರ ಮತ್ತು ಲೇಖಕರ ದೃಷ್ಟಿಯಿಂದ ಕಾಪಿರೈಟ್ ಕಾನೂನಿನ ಅನುಸರಣೆ ಮಹತ್ತ್ವದ್ದಾಗಿದೆ. ಆದರೆ ಅದರ ಉಲ್ಲಂಘನೆ ಧಾರಾಳವಾಗಿಯೇ ನಡೆದಿದೆ. ನ್ಯಾಯಾಲಯಗಳಿಂದ ಇದಕ್ಕೆ ಪರಿಹಾರವನ್ನು ಅಪೇಕ್ಷಿಸುವುದು ವ್ಯವಹಾರ್ಯವೆನಿಸುವುದಿಲ್ಲ. ಈಗ್ಗೆ ೧೫ ವರ್ಷ ಹಿಂದೆ ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯ Copyright Enforcement Advisory Council ಎಂಬ ಮಂಡಳಿಯನ್ನು ನೇಮಕ ಮಾಡಿತ್ತು. ವರ್ಷಕ್ಕೆ ಮೂರು ಸಲ ಅದರ ಸಮಾವೇಶಗಳು ನಡೆಯುತ್ತಿದ್ದವು. ಈಗ್ಗೆ ಹದಿನೈದು ವರ್ಷ ಹಿಂದೆ ೃಳ್ಳು ಕೂಡಾ ಕಾಪಿರೈಟ್ ಕೈಪಿಡಿಯೊಂದನ್ನು ಪ್ರಕಟಿಸಿತ್ತು.

ತಂತ್ರಜ್ಞಾನ-ಸೌಲಭ್ಯಗಳ ಹೆಚ್ಚಳದಿಂದಾಗಿ ಹೊಸ ಸಮಸ್ಯೆಗಳು ಉದ್ಭವಿಸಿವೆ. ವಿದ್ಯುನ್ಮಾನ ತಂತ್ರಜ್ಞಾನವೂ ಸೇರಿದಂತೆ ಈಗಿನ ಸಮಸ್ಯೆಗಳನ್ನು ಗ್ರಹಿಸಿ ಸ್ಪಂದಿಸಲು ಬೇಕಾದ ಶಿಕ್ಷಣದ ಕೊರತೆ ಇದೆ. ನ್ಯಾಯಾಂಗವೂ ಹೆಚ್ಚಿನ ತಜ್ಞತೆಯನ್ನು ಇನ್ನೂ ಗಳಿಸಿಕೊಳ್ಳಬೇಕಾಗಿದೆ.

ಈಗ್ಗೆ ಮೂವತ್ತು ವರ್ಷಗಳ ಹಿಂದೆ ವಿವಾದಗಳ ಇತ್ಯರ್ಥಕ್ಕಾಗಿ FIP ಮತ್ತು Authors' Guild of India ಸಂಯುಕ್ತವಾಗಿ Good Offices Committee of Authors and Publishers ಮಂಡಳಿಯೊಂದನ್ನು ಆರಂಭಿಸಿದ್ದವು. ಕೆಲವು ವರ್ಷ ಅದು ಸಕ್ರಿಯವಾಗಿತ್ತು. ಅದನ್ನು ಹೆಚ್ಚು ಬಲಪಡಿಸುವುದು ಉಪಯುಕ್ತವಾದೀತು.

ಕಾಲದಿಂದ ಕಾಲಕ್ಕೆ ಬದಲಾಗುತ್ತ ಹೋಗುವ ವಾಚಕಾಭಿರುಚಿಗೂ ಉದ್ಯಮ ಸಶಕ್ತವಾಗಿ ಸ್ಪಂದಿಸಬೇಕಾಗುತ್ತದೆ. ಉದಾಹರಣೆಗೆ: ಕಳೆದ ಮೂವತ್ತು ವರ್ಷಗಳಲ್ಲಿ ಓದುಗರ ಆದ್ಯತೆಗಳು ಗಣನೀಯವಾಗಿ ಬದಲಾಗುತ್ತಾ ಬಂದಿರುವುದನ್ನು ಗಮನಿಸಬಹುದು. ಹಿಂದೆ ಕಾದಂಬರಿ ಕೃತಿಗಳಿಗೆ ಹೆಚ್ಚಿನ ಬೇಡಿಕೆ ಇರುತ್ತಿತ್ತು. ವೈಚಾರಿಕ ಕೃತಿಗಳು ಬಹುಮಟ್ಟಿಗೆ ವಿಶ್ವವಿದ್ಯಾಲಯಗಳಂತಹ ಸಂಸ್ಥೆಗಳಿಂದ ಹೆಚ್ಚಾಗಿ ಪ್ರಕಟಗೊಳ್ಳುತ್ತಿದ್ದವು. ಆದರೆ ಈಗ ಕಾಲ್ಪನಿಕ ಸಾಹಿತ್ಯಕ್ಕಿಂತ ವೈಚಾರಿಕ ಸಾಹಿತ್ಯಕ್ಕೆ ಹೆಚ್ಚಿನ ಬೇಡಿಕೆ ಬೆಳೆದಿದೆ. ಇದೀಗ ಮಿಕ್ಕೆಲ್ಲ ಪ್ರಕಾರಗಳಿಗಿಂತ ಅಧಿಕವಾಗಿ ಮಾರಾಟವಾಗುತ್ತಿರುವವು ಧಾರ್ಮಿಕ ಕೃತಿಗಳು, ವ್ಯಕ್ತಿತ್ವವಿಕಾಸ ಕೃತಿಗಳು, ಜೀವನಚರಿತ್ರೆಗಳು ಮೊದಲಾದವು.

ಈ ಬೆಳವಣಿಗೆ ಒಳ್ಳೆಯದೇ. ಆದರೆ ಇದರಿಂದ ಒಂದು ಅಣಾಖಿಪರಿಣಾಮವೂ ಆಗಿದೆ. ಕಾಲ್ಪನಿಕ ಸಾಹಿತ್ಯ ಅಲಕ್ಷ್ಯಕ್ಕೆ ಗುರಿಯಾಗಿದೆ. ಕಾದಂಬರಿಗಳನ್ನು ಬರೆಯುವವರ ಸಂಖ್ಯೆಯೇ ಕ್ಷೀಣಿಸಿದೆ. ಪ್ರಮುಖ ಪತ್ರಿಕೆಗಳ ಧಾರಾವಾಹಿಗಳಲ್ಲಿ ಅನುವಾದಗಳದೇ ಈಗ ಸಿಂಹಪಾಲು. ಸಣ್ಣಕತೆ ಬರೆಯುವವರ ಸಂಖ್ಯೆ ಕುಗ್ಗಿದೆ. ಕನ್ನಡಕ್ಕೆ ಹೋಲಿಸಿದರೆ ತೆಲುಗು ಮೊದಲಾದ ಭಾಷೆಗಳಲ್ಲಿ ಹೆಚ್ಚಿನ ಸಮೃದ್ಧಿ ಕಾಣುತ್ತಿದೆ; ಆದರೆ ಆ ಭಾಷೆಗಳಲ್ಲಿಯೂ ಹಿಂದಿನ ಸ್ಥಿತಿಗೆ ಹೋಲಿಸಿದರೆ ಕಾಲ್ಪನಿಕ ಸಾಹಿತ್ಯ ಸೊರಗಿದೆ.

ಇದಕ್ಕೆ ಸುಲಭ ಪರಿಹಾರ ತೋರುತ್ತಿಲ್ಲ. ಆದರೆ ಇದು ಗಂಭೀರ ಚಿಂತನೆಗೆ ಅರ್ಹವಾದ ವಿಷಯ.

ವಿತರಣೆಯ ವಿಷಯಕ್ಕೆ ಬಂದರೆ: ಗ್ರಾಹಕರು ಇದ್ದಲ್ಲಿಗೇ ಮಾರಾಟಗಾರರು ಹೋಗಿ ಪುಸ್ತಕಗಳನ್ನು ತಲಪಿಸುವ ದಿಕ್ಕಿನಲ್ಲಿ ಹೆಚ್ಚಿನ ಕಾರ್ಯವಂತಿಕೆಗೆ ಅವಕಾಶವಿದೆ. ವಿದ್ಯುನ್ಮಾನ ಮಾಧ್ಯಮದ ಸವಾಲು ಹೆಚ್ಚುತ್ತಿರುವ ಈಗಿನ ಪರಿಸರದಲ್ಲಿ ಗ್ರಾಹಕರ ಮನೆಬಾಗಿಲಿಗೆ ಪುಸ್ತಕಗಳನ್ನು ತಲಪಿಸುವ ಯೋಜನೆಗಳು ಹೆಚ್ಚಾಗಿ ರೂಪಗೊಳ್ಳಬೇಕಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಂತೂ ಇದಕ್ಕೆ ಹೆಚ್ಚಿನ ಅವಕಾಶಗಳು ಇವೆ.

ಕೆಲವು ವರ್ಷ ಹಿಂದೆ ಯಶಸ್ವಿಯಾಗಿ ನಡೆಯುತ್ತಿದ್ದ 'ಬುಕ್ ಕ್ಲಬ್ ಮತ್ತು 'ಮೈಲ್ ಆರ್ಡರ್ ಪ್ರಯತ್ನಗಳು ಅಂಚೆ ವೆಚ್ಚ ತುಂಬಾ ದುಬಾರಿಯಾದುದರಿಂದ ಅಸ್ತಂಗತವಾದವು.
ಇದಕ್ಕೆ ಸರ್ಕಾರವು ಗಂಭೀರವಾಗಿ ಗಮನವನ್ನು ಹರಿಸುವುದು ಒಳ್ಳೆಯದು.

ಸರ್ಕಾರದ ಪಾತ್ರ ಕುರಿತು ಯೋಚಿಸುವಾಗ ಅನುವಾದ ಕ್ಷೇತ್ರ ಕುರಿತೂ ಚಿಂತನೆ ಸಂಗತವಾಗಿದೆ.

ಅನುವಾದ ಸಾಹಿತ್ಯ ಕ್ಷೇತ್ರದಲ್ಲಿ ನ್ಯಾಷನಲ್ ಬುಕ್ ಟ್ರಸ್ಟ್ ಮತ್ತು ಸಾಹಿತ್ಯ ಅಕಾಡೆಮಿಗಳು ಪ್ರಶಂಸನೀಯ ಕಾರ್ಯ ಮಾಡಿವೆ. ಆದರೆ ನಮ್ಮ ಭಾಷೆಗಳ ವ್ಯಾಪ್ತಿಯ ಮತ್ತು ಗಾತ್ರದ ದೃಷ್ಟಿಯಿಂದ ನೋಡುವಾಗ ಕಾರ್ಯವಿಸ್ತರಣೆಗೆ ಇನ್ನೂ ಹೇರಳ ಅವಕಾಶವಿದೆ. ಸರ್ಕಾರದ ಹೆಚ್ಚಿನ ಪ್ರಾಯೋಜನೆ ಮತ್ತು ಪೋಷಣೆ ಇದಕ್ಕೆ ಅಗತ್ಯವೆನಿಸುತ್ತದೆ.

ಜಗತ್ತಿನೆಲ್ಲೆಡೆಯ ಶ್ರೇಷ್ಠ ಕೃತಿಗಳನ್ನು ರಷ್ಯನ್ ಭಾಷೆಗೆ ಅನುವಾದ ಮಾಡಿಸಿ ಪ್ರಕಟಿಸುವ ದೊಡ್ಡ ಯೋಜನೆಯನ್ನು ರಷ್ಯದ ಸರ್ಕಾರ ಈಗ್ಗೆ ಇಪ್ಪತ್ತು - ಇಪ್ಪತ್ತೈದು ವರ್ಷ ಹಿಂದೆ ಕೈಗೊಂಡಿತ್ತು. ರವೀಂದ್ರನಾಥ ಠಾಕೂರ್, ಪ್ರೇಮಚಂದ್, ಕಿಶನ್ ಚಂದರ್ ಮೊದಲಾದವರ ಕೃತಿಗಳ ಅನುವಾದಗಳು ಲಕ್ಷಾಂತರ ಸಂಖ್ಯೆಯಲ್ಲಿ ರಷ್ಯದಲ್ಲಿ ವಿತರಣೆಗೊಂಡವು.

ಕನ್ನಡದ ಮಟ್ಟಿಗೆ ಹೇಳುವುದಾದರೆ: ಇಂಗ್ಲಿಷ್, ಹಿಂದೀ, ತೆಲುಗು, ಮರಾಠಿ, ತಮಿಳು, ಮಲಯಾಳಂ ಭಾಷೆಗಳಿಂದ ಗಣನೀಯ ಪ್ರಮಾಣದ ಕೃತಿಗಳು ಕನ್ನಡಕ್ಕೆ ತರ್ಜುಮೆಯಾಗುತ್ತಿವೆ. ಅದರ ಪ್ರಮಾಣಕ್ಕೆ ಹೋಲಿಸಿದರೆ ಕನ್ನಡದಿಂದ ಅನ್ಯ ಭಾಷೆಗಳಿಗೆ ಆಗಿರುವ ಅನುವಾದಗಳು ತೀರಾ ಕಡಮೆ. ಈ ಅಸಮತೋಲ ಸುಧಾರಿಸಬೇಕಾಗಿದೆ. ಕನ್ನಡದ

ಶ್ರೇಷ್ಠಕೃತಿಗಳು ಹೆಚ್ಚು ಸಂಖ್ಯೆಯಲ್ಲಿ ಅನ್ಯಭಾಷೆಗಳಿಗೆ ಮುಂದೆಯಾದರೂ ಅನುವಾದಗೊಳ್ಳಲಿ ಎಂದು ಆಶಿಸಬೇಕಾಗಿದೆ.

ಭಾರತೀಯ ಭಾಷೆಗಳಿಗೆ ಸಲ್ಲುವ ಪ್ರಾಧಾನ್ಯವನ್ನು ತಂದುಕೊಡಲು ಆಡಳಿತಾತ್ಮಕ ಕ್ರಮಗಳಂತೂ ಆಗಬೇಕು. ಇದರ ಜೊತೆಜೊತೆಗೆ ನಮ್ಮ ಭಾಷೆಗಳ ಸಾಮರ್ಥ್ಯವನ್ನು ಬೆಳೆಸುವ ಕೆಲಸಗಳೂ ತುಂಬಾ ನಡೆಯಬೇಕಾಗಿದೆ. ನಿದರ್ಶನಾರ್ಥ ಒಂದೆರಡು ಅಂಶಗಳನ್ನು ಪ್ರಸ್ತಾವಿಸುವೆ.

೧. ಕನ್ನಡ ಭಾಷೆಯ ಆಕಾರಸೌಷ್ಠವವನ್ನು ರಕ್ಷಿಸುವುದಕ್ಕೆ ಆದ್ಯತೆ ಸಲ್ಲಬೇಕಾಗಿದೆ. ಭಾಷೆಯ ಶಿಷ್ಟತೆ ಈಚಿನ ವರ್ಷಗಳಲ್ಲಿ ಒಂದಷ್ಟು ಶಿಥಿಲಗೊಂಡಿದೆ ಎಂದು ಬಹುಮಂದಿ ತಜ್ಞರಿಗೆ ಅನಿಸತೊಡಗಿದೆ. ಶಬ್ದಗಳ ಸುಷ್ಠುರೂಪದ ಬಳಕೆ, ಸಮಾಸಪದಗಳ ವ್ಯವಸ್ಥೆ ಮೊದಲಾದ ಅಂಶಗಳಿಗೆ ಹೆಚ್ಚಿನ ಗಮನ ಸಲ್ಲಬೇಕಾಗಿದೆ. ನಿಯಮಗಳ ಉಲ್ಲಂಘನೆ ಮಾಡುವುದು ತಮ್ಮ ಹಕ್ಕು ಎಂದು ವಾದಿಸುವವರು ಏನಾದರೂ ಮಾಡಿಕೊಳ್ಳಲಿ. ಆದರೆ ಶಿಷ್ಟತೆಯನ್ನು ಸ್ವೀಕರಿಸಿರುವ ವರ್ಗಗಳಲ್ಲಿ ಪರಿಜ್ಞಾನದ ಕೊರತೆಯಿಂದಾಗಿ ಹೇರಳ ಅಪಪ್ರಯೋಗಗಳು ಹರಡಿವೆ. ಈ ಸ್ಥಿತಿಯ ನಿವಾರಣೆ ಪ್ರಜ್ಞಾವಂತ ಪ್ರಯತ್ನಗಳಿಂದ ಸಾಧ್ಯವಿದೆ. ಗ್ರಂಥಪ್ರಕಾಶಕರು, ಬಹುಪ್ರಸಾರ ಪತ್ರಿಕೆಗಳ ಸಂಪಾದಕರುಗಳು ಇದಕ್ಕೆ ವಿಶೇಷ ಗಮನ ಹರಿಸಬೇಕಾಗಿದೆ.

೨. ಕನ್ನಡದಲ್ಲಿ ಶಿಶುಸಾಹಿತ್ಯವು ಗುಣದಲ್ಲಿಯೂ ಗಾತ್ರದಲ್ಲಿಯೂ ವೃದ್ಧಿ ಹೊಂದಬೇಕಾದ ಅಗತ್ಯವಿದೆ. ಪ್ರಕಾಶನೋದ್ಯಮದಲ್ಲಿ ಇದಕ್ಕೆ ಪ್ರಾಶಸ್ತ್ಯ ಸಲ್ಲಬೇಕು. ಶಿಶುಸಾಹಿತ್ಯರಚನೆಯ ಗುಣಮಟ್ಟವೂ ಹೆಚ್ಚಬೇಕು. ಇದೀಗ ೧೬-ಪಾಯಿಂಟ್ ದೊಡ್ಡ ಅಕ್ಷರದಲ್ಲಿ ಮುದ್ರಿತವಾದುದೆಲ್ಲ ಶಿಶುಸಾಹಿತ್ಯ ಎಂದು ಚಲಾವಣೆಯಾಗಿದೆ. ಈ ಸ್ಥಿತಿ ಸುಧಾರಿಸಬೇಕು.

ನೆಹರು ಬಾಲ ಪುಸ್ತಕಾಲಯ ಸರಣಿಯ ಮೂಲಕ ನ್ಯಾಷನಲ್ ಬುಕ್ ಟ್ರಸ್ಟ್ ತುಂಬಾ ಶ್ಲಾಘನೀಯ ಕೆಲಸ ಮಾಡಿತು. ಅಂತಹ ಪ್ರಯತ್ನಗಳು ಹೆಚ್ಚಬೇಕು.

ಪ್ರತಿವರ್ಷ ಮಕ್ಕಳಿಗಾಗಿ ಸುಮಾರು ಏಳೆಂಟು ಸಾವಿರ ಪುಸ್ತಕಗಳು ಪ್ರಕಟವಾಗುತ್ತಿವೆ ಎಂದು ಅಂದಾಜು. ಇವುಗಳ ಗುಣಮಟ್ಟದ ವಿಷಯ ಒಂದು ಕಡೆಗಿರಲಿ. ನಮ್ಮಲ್ಲಿ ಪ್ರಾಥಮಿಕ ಶಾಲೆಗೆ ಹೋಗುವ ಮಕ್ಕಳು ೧೦ ಕೋಟಿಯಷ್ಟು ಇರುವಾಗ ಎಷ್ಟು ಪ್ರಮಾಣದ ಶಿಶುಸಾಹಿತ್ಯ ಅಗತ್ಯವಿದೆಯೆಂದು ಊಹಿಸಬಹುದು.

ಕೆಲವು ವರ್ಷ ಹಿಂದೆ ಅಮೆರಿಕದಲ್ಲಿ ಒಂದು ಪ್ರಯೋಗ ನಡೆದಿತ್ತು. ಕಮ್ಮಟಗಳಲ್ಲಿ ಲೇಖನಾಭ್ಯರ್ಥಿಗಳಿಗೆ ೩೦೦ ಅಥವಾ ೪೦೦ ನಿರ್ದಿಷ್ಟ ಶಬ್ದಗಳ ಪಟ್ಟಿಗಳನ್ನು ಕೊಟ್ಟು, ಆ ಶಬ್ದಗಳನ್ನು ಮಾತ್ರ ಬಳಸಿ (ಪಟ್ಟಿಯಲ್ಲಿಲ್ಲದ ಒಂದು ಶಬ್ದವನ್ನೂ ಬಳಸದೆ) ಹೊಸಹೊಸ ಮಕ್ಕಳ ಕಥೆಗಳನ್ನು ಬರೆಯುವಂತೆ ನಿರ್ದೇಶಿಸಲಾಗಿತ್ತು. ಪ್ರತಿಷ್ಠಿತ ಲೇಖಕರನೇಕರೂ ಆ ಪ್ರಯೋಗದಲ್ಲಿ ಪಾಲ್ಗೊಂಡಿದ್ದರು.

ಇಂತಹ ಸರ್ಜನಶೀಲ ಪ್ರಯೋಗಗಳು ಕನ್ನಡದಲ್ಲಿ ಏಕೆ ನಡೆಯಬಾರದು?

೩. ಹಲವು ಪ್ರಮುಖ ಪ್ರಕಟಣೆಗಳು ದೃಷ್ಟಿಮಾಂದ್ಯ ಇರುವವರಿಗೆಂದೇ ದೊಡ್ಡ ಅಕ್ಷರದ ಆವೃತ್ತಿಗಳನ್ನು ಹೊರತರುತ್ತವೆ. ಮುದ್ರಣಸೌಕರ್ಯಗಳು ಸಾಕಷ್ಟು ಬೆಳೆದಿರುವುದರಿಂದ ಇಂತಹ ಆಯಾಮಗಳಿಗೂ ಮುಂದಿನ ದಿನಗಳಲ್ಲಿ ಗಮನ ಹರಿಸಬಹುದು.

೪. ಎಲ್ಲ ಪ್ರಕಾರದ ಶ್ರೇಷ್ಠಕೃತಿಗಳನ್ನು ದೃಶ್ಯ-ಶ್ರವ್ಯ ಮಾಧ್ಯಮಗಳಿಗೂ ಅಳವಡಿಸಬಹುದು. ಈ ಕ್ಷೇತ್ರ ಕಿಂಚಿದ್ ಭಿನ್ನವೆನಿಸಿದರೂ ಈ ದಿಕ್ಕಿನಲ್ಲಿ ಚಿಂತಿಸಲೇಬೇಕಾದ ಅನಿವಾರ್ಯತೆ ಪ್ರಕಾಶನೋದ್ಯಮಕ್ಕೆ ತೋರತೊಡಗಿದೆ.

ವಿಮರ್ಶೆಯನ್ನು ಕುರಿತು ಒಂದು ಮಾತು. ಪ್ರಕಾಶನೋದ್ಯಮಕ್ಕೆ ಈಗಿರುವ ಸ್ಥಿತಿಯ ವಿಮರ್ಶನ ಚಟುವಟಿಕೆ ಎಷ್ಟುಮಟ್ಟಿಗೆ ಪೂರಕ ಎಂಬ ವಿಷಯವನ್ನು ಪಕ್ಕಕ್ಕೆ ಇರಿಸೋಣ. ಒಂದು ಸಾಹಿತ್ಯಸಂಬಂಧಿ ಚಟುವಟಿಕೆಯಾಗಿ ವಿಮರ್ಶನ ಕ್ಷೇತ್ರ ಇನ್ನೂ ಬೆಳೆಯಬೇಕಾಗಿದೆ ಎಂದಷ್ಟೆ ಹೇಳಬಯಸುವೆ. ಗಂಭೀರ ವಿಮರ್ಶೆಗಾಗಿಯೇ ಮೀಸಲಾಗಿರುವ 'ಮಲಯಾಳಂ ಸಾಹಿತ್ಯಂ, 'ಗ್ರಂಥಲೋಕಂ, ಮರಾಠಿಯಲ್ಲಿ ಕೆಲವು ವರ್ಷ ಹಿಂದೆ ಪ್ರಕಟಗೊಳ್ಳುತ್ತಿದ್ದ 'ಆಲೋಚನಾ' ನಮ್ಮಲ್ಲಿಯೇ ಹಲವು ವರ್ಷ ಚೆನ್ನಾಗಿ ಬಂದ 'ಗ್ರಂಥಲೋಕ'ದ ರೀತಿಯ ನಿಯತಕಾಲಿಕಗಳನ್ನು ಕನ್ನಡದಲ್ಲಿ ಹೊರತರುವುದು ಏಕೆ ಸಾಧ್ಯವಾಗುತ್ತಿಲ್ಲ? ಇದು ಯೋಚಿಸಬಹುದಾದ ವಿಷಯ.

ಪ್ರಕಾಶನೋದ್ಯಮದ ಸ್ವಾಸ್ಥ್ಯದ ದೃಷ್ಟಿಯಿಂದ ಮುಖ್ಯವೆನಿಸುವ ಒಂದು ಅಂಶವನ್ನು ಪ್ರಸ್ತಾವಿಸಿ ನನ್ನ ನಿವೇದನೆಯನ್ನು ಮುಗಿಸುತ್ತೇನೆ.

ಕಂಪ್ಯೂಟರ್ ಬಳಕೆ, ಪೂರ್ತಿ ಸ್ವಯಂಚಾಲಿತ ಮುದ್ರಣ ಮತ್ತು ಬೈಂಡಿಂಗ್ - ಹೀಗೆ ಮುದ್ರಣ-ತಂತ್ರಜ್ಞಾನ ಅಗಾಧವಾಗಿ ಬೆಳೆದಿದೆ. ಆದರೆ ವಿಪರ್ಯಾಸವೆಂದರೆ - ಈ ತಂತ್ರಜ್ಞಾನಪ್ರಾಬಲ್ಯದ ಕಾರಣದಿಂದಲೇ ಕೆಲವು ಅತ್ಯಗತ್ಯ ಕೌಶಲಗಳು ಸತ್ತುಹೋಗಿವೆ. ಇವತ್ತು ದೂರದರ್ಶಕ ಹಿಡಿದು ಹುಡುಕಿದರೂ ಪ್ರೂಫ್‌ರೀಡರುಗಳಾಗಲಿ ಚಿತ್ರಕಾರರಾಗಲಿ ಸಿಗುವುದು ಕಷ್ಟ. ಪರಿಣಾಮವಾಗಿ ಮುದ್ರಣದ ಬಾಹ್ಯ ಆಕರ್ಷಣೆ ಹೆಚ್ಚಿದೆ; ಆದರೆ ಪ್ರಕಾಶನದ ಗುಣಮಟ್ಟಕ್ಕೆ ಕಾರಣವಾಗುವ ಕೌಶಲಗಳು ಕಣ್ಮರೆಯಾಗಿವೆ. ಎಷ್ಟೋ ಸಂದರ್ಭಗಳಲ್ಲಿ ಪ್ರೂಫ್‌ರೀಡಿಂಗಿನ ಜವಾಬ್ದಾರಿಯನ್ನು ಪ್ರಕಾಶಕರು ಲೇಖಕರಿಗೇ ವರ್ಗಾಯಿಸುತ್ತಾರೆ. ಇದನ್ನು ಸಮರ್ಪಕ ವ್ಯವಸ್ಥೆ ಎನ್ನಲಾಗದು; ಎಲ್ಲ ಲೇಖಕರೂ ಸಮರ್ಥ ಪ್ರೂಫ್‌ರೀಡಿಂಗ್ ಮಾಡಬಲ್ಲರೆಂದು ಹೇಳಲಾಗುವುದಿಲ್ಲ. ಪ್ರೂಫ್‌ರೀಡಿಂಗಿಗೆ ಬೇರೆಯದೇ ಆದ ವಿಶೇಷ ಪರಿಣತಿಯೇ ಬೇಕಾಗುತ್ತದೆ.

ಈಗಿನ ದೊಡ್ಡ ಸಮಸ್ಯೆಯೆಂದರೆ: ಕಂಪ್ಯೂಟರ್-ಆಧಾರಿತ ಅಕ್ಷರಜೋಡಣೆ ಸಾಧ್ಯವಾಗಿದೆ. ಹೀಗೆ ಕಂಪ್ಯೂಟರ್ ಯಂತ್ರವೇ ನಿರ್ಣಾಯಕವಾಗಿದೆ. ಅದನ್ನು ವಿಶಿಷ್ಟ ಅಗತ್ಯಗಳಿಗೆ ಹೊಂದಿಸಿಕೊಳ್ಳುವುದಕ್ಕೆ ಹರಸಾಹಸ ಮಾಡಬೇಕಾಗಿದೆ.

ಡಿ.ಟಿ.ಪಿ. ಕೆಲಸ ಮಾಡುವ ಹೆಚ್ಚಿನವರಿಗೆ ಗ್ರಂಥಮರ್ಯಾದೆಗಳ ಪರಿಚಯ ಇರುವುದಿಲ್ಲ. ಗ್ರಂಥಮುದ್ರಣಕ್ಕೂ ಸಾಹಿತ್ಯರೂಢಿಗಳಿಗೂ ಸಂಬಂಧಿಸಿದಂತೆ ದೀರ್ಘಕಾಲದಿಂದ ಹಲವಾರು ನಿಯಮಗಳೂ ರಿವಾಜುಗಳೂ ಸಂಪ್ರದಾಯಗಳೂ ಇವೆ ಎಂಬ ಪ್ರಾಥಮಿಕ ಸಂಗತಿಯ ಪರಿಚಯವೂ ಹೆಚ್ಚಿನ ಆಪರೇಟರುಗಳಿಗೆ ಇರುವುದಿಲ್ಲ. ಏಕೆಂದರೆ ಅವರು ಕಲಿತಿರುವುದು ಕಂಪ್ಯೂಟರಿನ ಬಳಕೆಯನ್ನು ಮಾತ್ರ.

ಶಾಸ್ತ್ರೀಯ ರೀತಿಯ ಮುದ್ರಣಕಲೆಯ ಹಿನ್ನೆಲೆ ಇದ್ದವರು ಕಂಪ್ಯೂಟರ್ ಅಕ್ಷರಜೋಡಣೆಯನ್ನೂ ಪೇಜ್‌ಮೇಕಿಂಗ್ ಇತ್ಯಾದಿಗಳನ್ನೂ ಕಲಿತರೆ ಅಂಥವರಿಂದ ಗುಣಮಟ್ಟದ ಕಾರ್ಯವನ್ನು ನಿರೀಕ್ಷಿಸಬಹುದು. ಅಂಥವರು ಈಗ ಇಲ್ಲವೆಂದಲ್ಲ; ಆದರೆ ವಿರಳ.

ಅಂತೂ ಲಭ್ಯ ತಂತ್ರಜ್ಞಾನವನ್ನು ಶಾಸ್ತ್ರೀಯ ಪದ್ಧತಿಗೆ ಹತ್ತಿರ ತರಲು ಗುಣದೃಷ್ಟಿ ಇದ್ದವರು ಬಹಳ ಶ್ರಮಪಡಬೇಕಾಗಿದೆ.



ಪುಸ್ತಕ ಎಂಬುದು ಕೇವಲ ಒಂದು ಉಪಯುಕ್ತ ಸರಕು ಎನ್ನುವ ಮಟ್ಟದಲ್ಲಿ ಇದ್ದರೆ ಸಾಲದು. ಅದು ಬಾಹ್ಯ ಆಕೃತಿಯಲ್ಲಿಯೂ ಒಳರಚನೆಯಲ್ಲಿಯೂ ಸುಂದರವಾಗಿ ಇರಬೇಕು. ವಾಚಕರು ಅದನ್ನು ಓದುತ್ತಾರೆ ಮಾತ್ರವಲ್ಲ, ಕಣ್ಣಿಂದ ನೋಡಿಯೂ ನೋಡುತ್ತಾರೆ. ಒಂದು ಪುಸ್ತಕ ತನ್ನಲ್ಲಿ ಇದೆ ಎಂಬುದು ಅವನಲ್ಲಿ ಹೆಮ್ಮೆಯನ್ನೂ ಆನಂದವನ್ನೂ ಉಂಟುಮಾಡಬೇಕು. ಈಗ್ಗೆ ಮೂವತ್ತು ನಲವತ್ತು ವರ್ಷ ಹಿಂದೆ ಪುಸ್ತಕಗಳ ವಿನ್ಯಾಸಕ್ಕೆ ಹೆಚ್ಚಿನವರು ತುಂಬಾ ಗಮನ ಕೊಡುತ್ತಿರಲಿಲ್ಲ. ಪುಸ್ತಕದ ವಿನ್ಯಾಸವನ್ನು ಪ್ರಕಾಶಕರು ಬಹುಮಟ್ಟಿಗೆ ಮುದ್ರಣಾಲಯಕ್ಕೆ ವಹಿಸಿ ಸುಮ್ಮನಾಗುತ್ತಿದ್ದರು. ಆದರೆ ಈಗ ಪುಸ್ತಕವು ಆಕರ್ಷಕವಾಗಿ ಇರುವುದು ಕಡ್ಡಾಯವಾಗಿದೆ. ಇದಕ್ಕೆ ಬೇಕಾದ ತಂತ್ರಜ್ಞಾನ ಸೌಕರ್ಯಗಳೂ ಈಗ ಲಭ್ಯವಿವೆ.

ಪುಸ್ತಕಗಳು ಒಂದು ಸಲವಷ್ಟೆ ಬಳಕೆಯಾಗಿ ಮುಗಿಯುವವಲ್ಲ. ಅವು ಹಲವಾರು ಬಾರಿ ಮತ್ತೆಮತ್ತೆ ಓದಿಸಿಕೊಳ್ಳುತ್ತವೆ. ಕೈಯಿಂದ ಕೈಗೆ ಬದಲಾಗುತ್ತಲೂ ಇರುತ್ತವೆ. ಇದು ಸುಗಮಗೊಳ್ಳಬೇಕಾದರೆ ಪುಸ್ತಕದ ವಿನ್ಯಾಸ ಮೇಲ್ಮಟ್ಟದಲ್ಲಿ ಇರಲೇಬೇಕಾಗುತ್ತದೆ.

ಹಿಂದೆಯಾದರೆ ಪುಸ್ತಕಗಳ ಬೆಲೆ ಹೆಚ್ಚಿನವರಿಗೆ ಎಟಕುವಂತಿರಬೇಕು ಎಂಬ ಭಾವನೆ ಇರುತ್ತಿತ್ತು. ಆದರೆ ಈಗ ಒಳ್ಳೆಯ ಮುದ್ರಣಕ್ಕೆ ಸ್ವಲ್ಪ ಹೆಚ್ಚಿನ ಬೆಲೆಯನ್ನು ಕೊಡಲು ಹೆಚ್ಚಿನ ಓದುಗರು ಹಿಂದೆಗೆಯುವುದಿಲ್ಲ.

ಆಯಾ ಪುಸ್ತಕದ ವಿಷಯಕ್ಕೆ ಪೂರಕವಾದ ರೀತಿಯಲ್ಲಿ ವಿನ್ಯಾಸವನ್ನು ಯೋಜಿಸಲು ಈಗ ಅನುಕೂಲತೆಗಳು ಇವೆ.

ಸಂಪಾದಿತ ಕೃತಿಗಳನ್ನು ಮುದ್ರಣಪೂರ್ವದಲ್ಲಿ ಪ್ರಕಟಣಸೌಷ್ಠವದ ದೃಷ್ಟಿಯಿಂದಲೇ ಪರಿಷ್ಕರಿಸುವ 'ಕಾಪಿ ಎಡಿಟಿಂಗ್ ಒಂದು ಪ್ರತ್ಯೇಕ ಶಿಸ್ತಾಗಿ ನಮ್ಮಲ್ಲಿ ಇನ್ನೂ ವಿಕಾಸಗೊಳ್ಳಬೇಕಾಗಿದೆ.

ತಮ್ಮ ಪ್ರಕಟಣೆಗಳು ಉನ್ನತ ಮಟ್ಟದವೇ ಆಗಿರಬೇಕೆಂದು ಬಯಸುವ ದೊಡ್ಡ ಪ್ರಕಾಶನಸಂಸ್ಥೆಗಳು ಮೂಲಪ್ರತಿಯನ್ನು ಆ ವಿಷಯದ ತಜ್ಞರ ಪರಿಶೀಲನೆಗಾಗಿ ಕೊಡುವುದುಂಟು. ಈ ಪರಿಶೀಲಕರ ನಿರ್ಣಯಗಳನ್ನು ಅನುಭವಿ ಲೇಖಕರೂ ಸ್ವೀಕರಿಸುತ್ತಾರೆ. ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಮೊದಲಾದ ಪ್ರಕಾಶನಸಂಸ್ಥೆಗಳಲ್ಲಂತೂ ಈ ವ್ಯವಸ್ಥೆ ಇತ್ತು. ಇದು ಅನುಕರಣೀಯ.

ಪ್ರತಿಪಾದಿತ ವಿಷಯವು ಉದ್ದಿಷ್ಟ ರೀತಿಯಲ್ಲಿ ಓದುಗರಿಗೆ ಎಷ್ಟುಮಟ್ಟಿಗೆ ಸಂವಹನಗೊಳ್ಳುತ್ತಿದೆ ಎಂಬುದನ್ನು ತ್ರಯಸ್ಥ ಪರಿಶೀಲಕರು ಸ್ವತಂತ್ರವಾಗಿ ನೋಡುವುದು ಲಾಭಕಾರಿ.

ಕರಡಚ್ಚು ತಿದ್ದುವಿಕೆಯೂ ಹೀಗೆ ಸ್ವತಂತ್ರವಾಗಿ ದಕ್ಷ ವ್ಯಕ್ತಿಗಳಿಂದ ನಡೆಯುವುದು ಪ್ರಯೋಜನಕರ.

ಪುಸ್ತಕ ಮುದ್ರಣ ಕೇವಲ ಯಾಂತ್ರಿಕ ಮಟ್ಟದಲ್ಲಿ ಉಳಿಯದೆ ಹೆಚ್ಚು ಸಮರ್ಥವಾಗಬಹುದಾದುದು ಈ ವಿಧಾನಗಳಿಂದ.

ಈಗಿನ ಸನ್ನಿವೇಶದಲ್ಲಿ ಇದು ವಾಸ್ತವತೆಯಿಂದ ದೂರವೆನಿಸಬಹುದು. ಏಕೆಂದರೆ ಈಗ ಯಾಂತ್ರಿಕವಾಗಿ ಕರಡಚ್ಚು ನೋಡುವವರೂ ಸಿಗುತ್ತಿಲ್ಲ. ಆದರೆ ಈ ಕೌಶಲಗಳು ಬೆಳೆಯಲೇಬೇಕಾಗಿದೆ.

ಇನ್ನೊಂದು ವಿಪರ್ಯಾಸವೂ ಇದೆ. ಅಕ್ಷರಜೋಡಣೆಗೆ ಐವತ್ತು ವರ್ಷಹಿಂದೆ ನಾವು ಪಡಬೇಕಾಗಿದ್ದ ಶ್ರಮ ಈಗ ನಿವಾರಣೆಯಾಗಿದೆ. ಈಗ ಕಂಪೋಸಿಂಗಿಗೆ ಮಾತ್ರವಲ್ಲದೆ ಪುಟಜೋಡಣೆಗೂ Adobe Pagemaker, Quark Xpress ಮೊದಲಾದ ಏನೇನೋ ಪರಿಕರಗಳು ಇವೆ. ಇದೆಲ್ಲ ಇದ್ದೂ ಮುದ್ರಣದಲ್ಲಿ ಹೊಸ ವೈವಿಧ್ಯ ಏಕೆ ಕಾಣುತ್ತಿಲ್ಲ? ಪುಸ್ತಕದ ಹೊರ-ಅಳತೆಯಿಂದ ಹಿಡಿದು ಪಂಕ್ತಿಸಮೂಹದವರೆಗೆ ಎಷ್ಟೋ ವೈವಿಧ್ಯಗಳು ಈಗ ಸಾಧ್ಯ. ಆದರೂ ಬಹುಮಟ್ಟಿಗೆ ಬಂಡಿಜಾಡಿನ ಪ್ರಾಚುರ್ಯವೇ ಕಾಣುತ್ತಿದೆ.

ನಮ್ಮ ಪುಸ್ತಕೋದ್ಯಮವೇ ದೇಶದಲ್ಲಿ ಕಾಗದದ ಅತಿ ದೊಡ್ಡ ಗ್ರಾಹಕ. ಹೀಗಿರುವಾಗ ಬೇರೆಬೇರೆ ಆಕಾರದ ಮತ್ತು ರಚನೆಯ ಕಾಗದಗಳ ತಯಾರಿಕೆ ಏಕೆ ಆಗುತ್ತಿಲ್ಲ? ನಾವು ಡಿಮ್ಯಾಂಡ್ ಮಾಡುತ್ತಿಲ್ಲ ಎಂದೇ ಇದರ ಅರ್ಥ.

ದುಬಾರಿಯಾದರೂ ವಿಶೇಷ ಟೇಬಲ್-ಟಾಪ್ ಪ್ರಕಟಣೆಗಳಿಗೆ ಗ್ರಾಹಕವರ್ಗ ಇಲ್ಲದಿಲ್ಲ. ಆದರೆ ಕನ್ನಡದಲ್ಲಿ ಇಂತಹ ಪ್ರಕಟಣೆಗಳು ಬಂದಿರುವುದು ಕಡಮೆ.

ಹಿಂದೆ ಮುದ್ರಣಸೌಕರ್ಯಗಳು ಕಡಮೆ ಇದ್ದಾಗ ಈಗ 'ಕಲೆಕ್ಟರ್ಸ್ ಐಟಮ್ಸ್' ಎಂದು ಭಾವಿಸಬಹುದಾದ ಎಷ್ಟೋ ಪ್ರಕಟಣಗಳು ಬಂದಿದ್ದವು. ಈಗ ಸೌಲಭ್ಯಗಳು ಹೆಚ್ಚಿದ್ದರೂ ಕಲಾವಂತಿಕೆಯ ದೃಷ್ಟಿಯಿಂದ ಮೊನಾಟನಿ ಕಾಣುತ್ತಿದೆ.

ಇದರಲ್ಲಿ ಹೆಚ್ಚಿನ ಲವಲವಿಕೆಯನ್ನು ತರುವ ಪ್ರಯತ್ನವನ್ನು ಮಾಡೋಣ.

ಈ ಕೆಲವು ಅಂಶಗಳ ಬಗೆಗೆ ಅವಕಾಶವಾದಾಗ ನನ್ನ ವೃತ್ತಿಬಂಧುಗಳು ಪರಾಮರ್ಶನೆ ನಡೆಸಲಿ ಎಂದು ಬಿನ್ನವಿಸಿ ನನ್ನ ಆಶಯಭಾಷಣವನ್ನು ಮುಕ್ತಾಯಗೊಳಿಸುತ್ತಿದ್ದೇನೆ. ಎಲ್ಲರಿಗೂ ಶುಭ ಕೋರುತ್ತೇನೆ*.



* ಕನ್ನಡ ಪುಸ್ತಕ ಪ್ರಾಧಿಕಾರ ಮತ್ತು ಕರ್ನಾಟಕ ಪ್ರಕಾಶಕರ ಸಂಘ ಬೆಂಗಳೂರಿನಲ್ಲಿ ೨೩-೪-೨೦೧೧ರಂದು ಏರ್ಪಡಿಸಿದ್ದ ವಿಶ್ವ ಪುಸ್ತಕ ದಿನಾಚರಣೆ ಮತ್ತು ಕರಡಚ್ಚು ತರಬೇತಿ ಕಮ್ಮಟದ ಉದ್ಘಾಟನಾ ಸಮಾರಂಭದಲ್ಲಿ ನೀಡಿದ ಆಶಯ ಭಾಷಣ.

# ಕನ್ನಡ ಪುಸ್ತಕೋದ್ಯಮ: ಕೆಲವು ಆತಂಕಗಳು



ಪ್ರಕಾಶ್ ಕಂಬತ್ತಳ್ಳಿ

ಕನ್ನಡ ಪುಸ್ತಕೋದ್ಯಮ ಸುಮಾರು ೧೮೦ ವರ್ಷಗಳ ಇತಿಹಾಸ ಹೊಂದಿರುವಂಥದ್ದು. ಹಾಗೆ ನೋಡಿದರೆ ಪುಸ್ತಕೋದ್ಯಮ ಅನ್ನೋದು ಕೂಡಾ ಕೇವಲ ಬಳಕೆಯಲ್ಲಿ ಬಂದ ಪದ ಅಷ್ಟೆ. ಪುಸ್ತಕಕ್ಕೆ ಇನ್ನೂ ಉದ್ಯಮದ ಸ್ವರೂಪ ಬಂದಿಲ್ಲ. ಉದ್ಯಮ ಎಂದು ಸರ್ಕಾರವೂ ಇದನ್ನು ಗುರುತಿಸಿಲ್ಲ. ನಾವೆಲ್ಲ ಚಿತ್ರೋದ್ಯಮ, ಕೈಗಾರಿಕೋದ್ಯಮ ಎಂದೆಲ್ಲಾ ಹೇಳುವಂತೆ 'ಪುಸ್ತಕೋದ್ಯಮ' ಎಂಬ ಪದವನ್ನು ಬಳಸುತ್ತಾ ಬಂದಿದ್ದೇವೆ. ಬದಲಿಗೆ ಇದನ್ನು ಪುಸ್ತಕ ಸಂಸ್ಕೃತಿ ಎಂದು ಬಳಸುವುದು ಸೂಕ್ತ ಎಂದು ಕಾಣುತ್ತದೆ.

ಪುಸ್ತಕೋದ್ಯಮ ಅಥವಾ ಪುಸ್ತಕ ಸಂಸ್ಕೃತಿ ಇಂದು ಒಂದು ವಿಚಿತ್ರ ಕಾಲಘಟ್ಟದಲ್ಲಿದೆ ಅಂದರೂ ತಪ್ಪಲ್ಲ.

ಜನಸಂಖ್ಯೆ ಜಾಸ್ತಿಯಾಗ್ತಾ ಇದೆ. ಆದರೆ ಓದುಗರ ಸಂಖ್ಯೆ ಜಾಸ್ತಿಯಾಗ್ತಾ ಇಲ್ಲ. ಹೊಸ ಓದುಗರು ಬರ್‍ತಾ ಇಲ್ಲ. ಆದರೆ ವಿಶೇಷ ಅಂದ್ರೆ ಪುಸ್ತಕಗಳ ಪ್ರಕಟಣೆಯ ಸಂಖ್ಯೆ ವರ್ಷದಿಂದ ವರ್ಷಕ್ಕೆ ಆಶ್ಚರ್ಯವಾಗುವ ರೀತಿಯಲ್ಲಿ ಹೆಚ್ಚಾಗ್ತಾ ಇದೆ.

ಕಳೆದ ಮೂರ್‍ನಾಲ್ಕು ವರ್ಷಗಳ ಹಿಂದೆ ಒಂದೂವರೆ ಸಾವಿರದಿಂದ ಎರಡು ಸಾವಿರ ಪುಸ್ತಕಗಳು ಪ್ರಕಟವಾಗ್ತಾ ಇದ್ದವು. ಆದರೆ ಈಗ ಈ ಸಂಖ್ಯೆ ಅಧಿಕೃತವಾಗಿ ಗ್ರಂಥಾಲಯ ನೋಂದಣಿ ಪ್ರಕಾರ ಆರು ಸಾವಿರ ಸಂಖ್ಯೆಗೇರಿದೆ. ಇನ್ನು ನೋಂದಣಿಯಾಗದ ಪುಸ್ತಕಗಳನ್ನು ಲೆಕ್ಕಕ್ಕೆ ತೆಗೆದುಕೊಂಡ್ರೆ ಈ ಸಂಖ್ಯೆ ೭೦೦೦ವನ್ನೂ ದಾಟಬಹುದು.

ಓದುಗರ ಸಂಖ್ಯೆ ಹೆಚ್ಚಿಲ್ಲ. ಕನ್ನಡ ಪುಸ್ತಕ ಮಾರಾಟ ಮಾಡುವ ಮಳಿಗೆಗಳ ಸಂಖ್ಯೆ ಹೆಚ್ಚಿಲ್ಲ. ಆದರೂ ಪುಸ್ತಕಗಳ ಸಂಖ್ಯೆ ಹೆಚ್ಚಾಗಿದೆ. ಇದಕ್ಕೆ ಗ್ರಂಥಾಲಯ ಮತ್ತು ಪುಸ್ತಕ ಪ್ರಾಧಿಕಾರಗಳ ಖರೀದಿ ನೀತಿ ಕಾರಣವೇ ಎಂಬುದನ್ನು ನಾವಿಂದು ಚರ್ಚಿಸಬೇಕಾಗಿದೆ. ನಮ್ಮಲ್ಲಿ ಎಲ್ಲದಕ್ಕೂ ಒಂದು ನೀತಿ ಇದೆ. ಕೃಷಿಗೆ ಕೃಷಿನೀತಿ ಇದೆ. ಕೈಗಾರಿಕೋದ್ಯಮಕ್ಕೆ ಒಂದು ನೀತಿ ಇದೆ. ಆದರೆ ಪುಸ್ತಕೋದ್ಯಮಕ್ಕೆ ಒಂದು ನೀತಿ ಇದುವರೆಗ ರೂಪುಗೊಂಡಿಲ್ಲ.

ಲೇಖಕ-ಪ್ರಕಾಶಕ-ಮಾರಾಟಗಾರ ಮತ್ತು ಓದುಗರೆಲ್ಲರೂ ಈಗ ಬಿಡಿಬಿಡಿಯಾಗಿ ಚದುರಿ ಹೋಗಿದ್ದೂ, ಒಂದು ನೀತಿಯಿಂದ ಇವರನ್ನೆಲ್ಲಾ ಒಂದುಗೂಡಿಸಬೇಕಾಗಿದೆ. ಪುಸ್ತಕೋದ್ಯಮಕ್ಕ ಒಂದು ನೀತಿಯ ಜರೂರು ಈಗಿನ ಅಗತ್ಯಗಳಲ್ಲಿ ಒಂದು.

ನಮ್ಮಲ್ಲಿ ಈಗ ಏನಾಗಿದೆ ಅಂದ್ರೆ, ಕನ್ನಡದಲ್ಲಿ ಎಷ್ಟು ಪುಸ್ತಕ ಪ್ರಕಟವಾಗ್ತಿವೆ ಅಂತ ಯಾರಿಗೂ ಗೊತ್ತಿಲ್ಲ. ಸುಮ್ಮನೆ ಒಂದು ಅಂದಾಜಿನ ಮೇಲೆ ಹೇಳ್ತೇವೆ. ಖಚಿತವಾಗಿ ಇಷ್ಟೆ ಅಂತ ಹೇಳುವ ವ್ಯವಸ್ಥೆ ಇಲ್ಲ. ಪುಸ್ತಕ ಪ್ರಕಟಣೆ ಕಾರ್ಯವನ್ನು ಖಾಸಗಿಯವರು ಮಾಡ್ತಾರೆ, ಸರಕಾರ ಮಾಡುತ್ತೆ ಮತ್ತು ಅಕಾಡೆಮಿ ವಿಶ್ವವಿದ್ಯಾಲಯಗಳಂತಹ ಅನುದಾನಿತ ಸಂಸ್ಥೆಗಳೂ ಮಾಡುತ್ತವೆ. ಪ್ರತಿಯೊಬ್ಬರೂ ತಮಗೆ ತೋಚಿದಂತೆ ಈ ಉದ್ಯಮವನ್ನು ಬೆಳೆಸುತ್ತಾ ಬಂದಿದ್ದಾರೆ. ಇವರೆಲ್ಲರೂ ಪ್ರಕಟಿಸುವ ಪ್ರತಿ ಪುಸ್ತಕವೂ ಒಂದು ಕಡೆ ನೋಂದಣಿಯಾಗಬೇಕು. ಕನ್ನಡ ಪುಸ್ತಕ ಪ್ರಾಧಿಕಾರವು ಕೆಲವು ವರ್ಷಗಳ ಹಿಂದೆ ಪ್ರಕಾಶಕರನ್ನು ನೋಂದಣಿ ಮಾಡುವ ವ್ಯವಸ್ಥೆ ಹೊಂದಿತ್ತು. ಆದರೆ ಆ ವ್ಯವಸ್ಥೆ ನಿಂತುಹೋಯಿತು. ಈ ಅಂಶಗಳನ್ನೆಲ್ಲಾ ಗಣನೆಗೆ ತೆಗೆದುಕೊಂಡು ಒಂದು ನೀತಿಗೆ ಒಳಪಡಿಸಿ ಪುಸ್ತಕೋದ್ಯಮವನ್ನು ಬೆಳೆಸಿದರೆ ಆಗ ಪುಸ್ತಕೋದ್ಯಮದ ಚಿತ್ರಣವೇ ಬದಲಾದೀತು.

**ಆತಂಕಗಳು:** ಹಲವಾರು ಆತಂಕಗಳು ಪುಸ್ತಕೋದ್ಯಮವನ್ನು ಕಾಡುತ್ತಲೇ ಬಂದಿವೆ. ಬಹಳ ವಿಶೇಷ ಅಂದ್ರೆ ಪುಸ್ತಕೋದ್ಯಮವನ್ನು ಆರಂಭದಿಂದಲೂ ಬೆಳೆಸುತ್ತಾ ಬಂದಿರುವವರು ಬಹುಮಟ್ಟಿಗೆ ಹವ್ಯಾಸಿ ಪ್ರಕಾಶಕರೆ. ಕರ್ನಾಟಕದಲ್ಲೀಗ ಸರಿ ಸುಮಾರು ೧೫೦೦ ಪ್ರಕಾಶಕರಿದ್ದಾರೆ. ಅದರಲ್ಲಿ ವೃತ್ತಿಪರ ಪ್ರಕಾಶಕರ ಸಂಖ್ಯೆ ೬೦-೭೦ರ ಗಡಿಯನ್ನೂ ದಾಟಿಲ್ಲ. ಶೇ. ೭೦ರಷ್ಟು ಪ್ರಕಾಶಕರು ಹವ್ಯಾಸಿಗಳೇ. ಹಾಗಾಗಿ ಪ್ರಕಾಶಕರನ್ನು ವ್ಯವಸ್ಥಿತವಾಗಿ ಸಂಘಟಿಸಲು ಇಲ್ಲಿಯವರೆಗೂ ಸಾಧ್ಯವಾಗಿಲ್ಲ. ಪುಸ್ತಕೋದ್ಯಮದಲ್ಲಿ ಏನಾಗಿದೆ, ಏನಾಗ್ತಿದೆ ಅನ್ನೋದು ಬಹಳಷ್ಟು ಪ್ರಕಾಶಕರಿಗೆ ಗೊತ್ತಿರಲ್ಲ. ಅನೇಕ ಪ್ರಕಾಶಕರುಗಳು ಪ್ರಿಂಟರುಗಳ ಮರ್ಜಿಯಲ್ಲಿರುತ್ತಾರೆ. ಯಾಕೆಂದರೆ ಅವರಿಗೆ ಪುಸ್ತಕದ ಗಾತ್ರ, ಇದೇನು Demmy ನೋ Crown ನೋ ಅನ್ನೋದು ಗೊತ್ತಿರಲ್ಲ. White Paper ಯಾವುದು, Maplitho ಯಾವುದು, Light Wt. Paper ಯಾವುದು ಅಂತ ತಿಳಿದಿರಲ್ಲ. Cover page ಬೋರ್ಡ್ ಎಷ್ಟು GSMದು ಅಂತ ಗೊತ್ತಿರಲ್ಲ.



ಇದೆಲ್ಲ ಯಾಕಾಗುತ್ತೆ ಅಂದರೆ ಪುಸ್ತಕ ಉದ್ಯಮವಾಗಿಲ್ದೆ ಇರೋದು. ಪ್ರಕಾಶಕರಿಗೆ ತರಬೇತಿ ನೀಡುವಂತಹ ಯಾವುದೇ Diploma / Certificate Course ಇಡೀ ಕರ್ನಾಟಕದಲ್ಲಿ ಇಲ್ದೆ ಇರೋದು. ಇಂತಹ ಒಂದು ವ್ಯವಸ್ಥೆಯ ಅಗತ್ಯ ಇಂದಿನ ಆದ್ಯತೆಗಳಲ್ಲಿ ಒಂದು.

ಇವುಗಳ ಜೊತೆಗೆ ಪುಸ್ತಕೋದ್ಯಮಕ್ಕೆ ಒಂದಾದ ಮೇಲೊಂದರಂತೆ ಆತಂಕಗಳು ಎದುರಾಗ್ತಾ ಇರೋದು. T.V. ಮಾಧ್ಯಮ ಬಂತು ಒಂದು ಕಾಲದಲ್ಲಿ ಕಾದಂಬರಿ ಪ್ರಕಾರವನ್ನು ಓದಿ ಬೆಳೆಸಿದಂತಹ ನಮ್ಮ ಮಹಿಳಾ ಓದುಗರೆಲ್ಲಾ ಕೈ ತಪ್ಪಿಹೋದರು. ದಿನದ ೨೪ ಗಂಟೆಗಳೂ ಮನರಂಜನೆ ಒದಗಿಸುವ ಈ ಮಾಧ್ಯಮ ಅನೇಕ ಓದುಗರನ್ನು ಕಿತ್ತುಕೊಂಡಿತು. ಬಡಾವಣೆಗೆ ಹತ್ತರಂತೆ ಇದ್ದ ಸರ್ಕ್ಯುಲೇಟಿಂಗ್ ಲೈಬ್ರರಿಗಳೆಲ್ಲಾ ಮುಚ್ಚಿ ಹೋದವು.

ಇದರ ಜೊತೆಗೆ ಬಂದ Computer, Internetಗಳು ಮತ್ತಷ್ಟು ಓದುಗರ ಮೇಲೆ ದಾಳಿಯಿಟ್ಟಿವೆ.

ಅದೂ ಹೋಗಲಿ ಅಂದ್ರೆ ಈಗ ತಾನೇ ನಮ್ಮ ಮೇಲೆರಗಿರುವ ಕಿಂಡಲ್* / ಐಪ್ಯಾಡ್ ನಮ್ಮ ಕತ್ತು ಹಿಸುಕುತ್ತಾ ಇವೆ. ಇವೂ ಹೋಗಲಿ ಅಂದ್ರೆ ಇತ್ತೀಚಿಗೆ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಬಿಡುಗಡೆಯಾದ 'ಕೇಳು'** ಪುಸ್ತಕಗಳು ಮತ್ತಷ್ಟು ಆತಂಕವನ್ನು ಉಂಟುಮಾಡಿವೆ. ಇವೆಲ್ಲವನ್ನೂ ನೋಡಿದರೆ ನಾವು ಇಲ್ಲಿಯವರೆಗೆ ನೋಡಿದ ಪುಸ್ತಕಗಳ ಸ್ವರೂಪವೇ ಬದಲಾಗ್ತಾ ಇದೆಯೇನೋ ಅನ್ನಿಸುತ್ತೆ. ಕಾಗದರಹಿತ ಪುಸ್ತಕಗಳು ಇನ್ನು ಕೆಲವೇ ವರ್ಷಗಳಲ್ಲಿ ಬಂದರೂ ಆಶ್ಚರ್ಯವಿಲ್ಲ.

ಕಳೆದ ಕೆಲವು ವರ್ಷಗಳಿಂದೀಚೆಗೆ ಪತ್ರಿಕೆಗಳಲ್ಲಿ ಅಂಕಣ ಬರಹಗಳು ಆರಂಭವಾದವು. ಹಿಂದೆ. ಎಲ್ಲೋ ಯಾವಾಗಲೋ ಒಂದೊಂದು ಅಂಕಣಗಳನ್ನು ಪತ್ರಿಕೆಗಳು ಪ್ರಕಟಿಸ್ತಾ ಇದ್ದವು. ಆದರೆ ಈಗ ಬಹುತೇಕ ಪತ್ರಿಕೆಗಳು ದಿನಕ್ಕೆ ಕನಿಷ್ಠ ೩ ರಿಂದ ೪ ಅಂಕಣಗಳನ್ನು ನಿರಂತರವಾಗಿ ಪ್ರಕಟಿಸ್ತಾ ಇವೆ. ಇವೆಲ್ಲವೂ ಮುಂದೆ ಪುಸ್ತಕಗಳಾಗಿ ಪ್ರಕಟವಾಗುತ್ತವೆ. ಬಹುಶಃ ಪುಸ್ತಕೋದ್ಯಮದ ಉಲುಸಾದ ಬೆಳೆಗೆ ಇದೂ ಒಂದು ಕಾರಣ ಇರಬಹುದು ಎಂದೆನ್ನಿಸುತ್ತದೆ.

ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಏಕಗವಾಕ್ಷಿ ಖರೀದಿ ಕೂಡಾ ಪುಸ್ತಕಗಳ ಹೆಚ್ಚಳಕ್ಕೆ ಕಾರಣವಾಗಿದೆ. ಆದರೆ ಪುಸ್ತಕದ ಒಳ ಹೂರಣದ, ಗುಣಮಟ್ಟಕ್ಕೆ ಆದ್ಯತೆಯಿಲ್ಲ. ಗ್ರಂಥಾಲಯಕ್ಕೆ ಬರುವ ಶೇ. ೭೦ರಷ್ಟು ಪುಸ್ತಕಗಳು ಮಾರುಕಟ್ಟೆಗೆ ಬರುವುದೇ ಇಲ್ಲ. ಗ್ರಂಥಾಲಯಕ್ಕೇ ಇವು ಸೀಮಿತ. ಗ್ರಂಥಾಲಯ ಇಲಾಖೆಯ ಸುಧಾರಣೆಯೂ ಸಾಧ್ಯವೇ ಇಲ್ಲ. ಇಲ್ಲಿಯ ನೂರೆಂಟು ವ್ಯವಹಾರಗಳನ್ನು ಗಮನಿಸಿದ ಬಹಳಷ್ಟು ಪ್ರಕಾಶಕರು ಆ ಕಡೆ ತಲೆಹಾಕುವುದನ್ನೇ ಬಿಟ್ಟಿದ್ದಾರೆ.

---

* ಇದೊಂದು ಡೆಮಿ ೧/೮ ಗಾತ್ರದ ಸುಮಾರು ೧ ಸೆಂ.ಮೀ. ದಪ್ಪ ಇರುವ ಮಿನಿಕಂಪ್ಯೂಟರ್ ಇದರಲ್ಲಿ ಸುಮಾರು ೧೦,೦೦೦ ಪುಸ್ತಕಗಳನ್ನು ಹಾಕಬಹುದು. ಯಾವುದೇ ಪುಟ / ಪುಸ್ತಕವನ್ನು ಓದುವ, ಅಕ್ಷರಗಳನ್ನು ದೊಡ್ಡದು ಚಿಕ್ಕದು ಮಾಡುವ ಮತ್ತು ಓದಲು ಕಷ್ಟವಾದರೆ ಓದಿಹೇಳುವ ಸೌಲಭ್ಯಗಳೆಲ್ಲವೂ ಈ ಕಿಂಡಲ್‌ನಲ್ಲಿವೆ.

** ಪುಸ್ತಕವನ್ನೂ ಪ್ರಸಿದ್ಧರೊಬ್ಬರಿಂದ ಓದಿಸಿ ಅದನ್ನು ಸಿ.ಡಿ. ರೂಪದಲ್ಲಿ ಪ್ರಕಟಿಸುವುದು. ಓದುವ ಯಾವ ಶ್ರಮವೂ ಇಲ್ಲದೆ, ವಾಹನದಲ್ಲಿ ಚಲಿಸುವಾಗ, ಮನೆಯಲ್ಲಿ ಅಥವಾ ಇನ್ನಾವುದೇ ಸ್ಥಳದಲ್ಲಿ ಬೇಕೆಂದಾಗ, ಹಾಡಿನ ಸಿ.ಡಿ.ಯಂತೆ ಹಾಕಿಕೊಂಡು ಕೇಳಬಹುದು. ವಸುಧೇಂದ್ರರ 'ನಮ್ಮಮ್ಮ ಅಂದ್ರೆ ನಂಗಿಷ್ಟ' ಇತ್ಯಾದಿ.

ಪುಸ್ತಕ ತನ್ನಿಂದ ತಾನೇ ಸ್ವತಂತ್ರವಲ್ಲ. ಇದು ನಾವು ಪಡೆಯುವ ಶಿಕ್ಷಣದೊಂದಿಗೆ ತಳಕು ಹಾಕಿಕೊಂಡಿದೆ. ನಮ್ಮ ಪುಸ್ತಕ ಮಳಿಗೆಗೆ ಬರುವ ಓದುಗರನ್ನು ನಾನು ಗಮನಿಸಿದ್ದೇನೆ. ಅವರೆಲ್ಲಾ ೩೫-೪೦ ವರ್ಷಗಳ ಆಸುಪಾಸಿನಲ್ಲಿರುವವರೆ.

ಯುವಜನಾಂಗ ಕನ್ನಡ ಪುಸ್ತಕಗಳ ಕಡೆ ಆಕರ್ಷಿತರಾಗುತ್ತಿಲ್ಲ ಯಾಕೆ? ಯಾಕೇಂದ್ರೆ ಅವರು ಪಡೆದ ಶಿಕ್ಷಣ ಮಾಧ್ಯಮ. ಇಂಗ್ಲಿಷ್ ಭಾಷೆಯಲ್ಲಿಯೇ ಶಿಕ್ಷಣ ಪಡೆದ ಹುಡುಗರಿಗೆ ಕನ್ನಡ ಪುಸ್ತಕಗಳ ಬಗ್ಗೆ ಯಾವ ಆಸಕ್ತಿ ಇದ್ದೀತು? ಕನ್ನಡವನ್ನು ೩ನೆಯ ಭಾಷೆಯಾಗಿ ಓದಿದವ ಕನ್ನಡ ಪುಸ್ತಕಗಳ ಬಗ್ಗೆ ಯವ ಆಸಕ್ತಿ ಉಳಿಸಿಕೊಂಡಾನು? ಇನ್ನು ಕರ್ನಾಟಕದಲ್ಲಿ ತಳವೂರುತ್ತಿರುವ International Schoolಗಳನ್ನು ಕುರಿತು ಮಾತಾಡೋ ಹಾಗೇ ಇಲ್ಲ. ಕಡ್ಡಾಯವಾಗಿ ಕನ್ನಡವನ್ನು SSLCವರೆಗಾದರೂ ಮಾಧ್ಯಮವಾಗಿ ಬೇಡ-ಕನಿಷ್ಠ ಒಂದು ಭಾಷೆಯಾಗಿಯಾದರೂ ಕಲಿಸದಿದ್ದರೆ ಕನ್ನಡಕ್ಕೆ ಉಳಿಗಾಲವೇ ಇರುವುದಿಲ್ಲ. ಬರಬರುತ್ತಾ ಕನ್ನಡ ಕೇವಲ ಮನೆಯಲ್ಲಿ ಮಾತಾಡುವ ಭಾಷೆಯಾಗಿ ಉಳಿದುಬಿಡುತ್ತೋ ಏನೋ.

ಈಗಲೇ ಸರ್ಕಾರ ಎಚ್ಚೆತ್ತುಕೊಂಡು ಸೂಕ್ತ ಕ್ರಮ ಕೈಗೊಳ್ಳದಿದ್ದಲ್ಲಿ ಪುಸ್ತಕೋದ್ಯಮ ತೀವ್ರ ಸಂಕಷ್ಟವನ್ನೆದುರಿಸಬೇಕಾಗುತ್ತದೆ.

ಕನ್ನಡದ ಓದುಗರು ವಿಶ್ವದಾದ್ಯಂತ ಹರಡಿದ್ದರೂ ಅವರಿಗೆ ಪುಸ್ತಕಗಳನ್ನು ತಲಪಿಸುವ ಸೂಕ್ತ ವ್ಯವಸ್ಥೆ ಇಲ್ಲಿಯವರೆಗೆ ಇರಲಿಲ್ಲ. ಅಂಚೆಯೊಂದೇ ಮಾರ್ಗವಾಗಿತ್ತು. ಆದರೆ ಈಗ ಅಮೆಜಾನ್ ಡಾಟ್ ಕಾಂ, ಗೂಗಲ್ ಸರ್ಚ್ ಇಂಜಿನ್ ಮತ್ತು ಫ್ಲಿಪ್‌ಕಾರ್ಟ್ ಸಂಸ್ಥೆಗಳೂ ಕನ್ನಡ ಪುಸ್ತಕಗಳನ್ನೂ ಆನ್‌ಲೈನ್ ಮೂಲಕ ಮಾರಾಟ ಮಾಡುವ ವ್ಯವಸ್ಥೆ ಮಾಡಿವೆ. ಗ್ರಾಹಕರು ಕೊತಲ್ಲೇ ಪುಸ್ತಕ ಪಡೆಯುವ ಇಂತಹ ಯೋಜನೆ ಪುಸ್ತಕೋದ್ಯಮದ ಬೆಳವಣಿಗೆಗೆ ಆಶಾದಾಯಕವಾಗಿದೆ.

ಈ ಹಿನ್ನೆಲೆಯಲ್ಲಿ ನಾವು ಪುಸ್ತಕೋದ್ಯಮವನ್ನು ಕುರಿತ ಚರ್ಚೆಯನ್ನು ಮರುಪರಿಶೀಲನೆಗೊಳಪಡಿಸಬೇಕಾಗಿದೆ*.

* ಬೆಳಗಾವಿಯಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ಮಾಡಿದ ಭಾಷಣ.



# ಪುಸ್ತಕ ಉದ್ಯಮ: ಕೆಲವು ಸಲಹೆಗಳು

ಆರ್.ಡಿ.ಜಿ.

ನಾಡು-ನುಡಿಯ ಬೆಳವಣಿಗೆಯಲ್ಲಿ ಪುಸ್ತಕಗಳು ಬಹು ಮುಖ್ಯ ಪಾತ್ರವನ್ನು ವಹಿಸುತ್ತವೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಪುಸ್ತಕಗಳು ನಮ್ಮ ಸಹಪಾಠಿಗಳು, ಸಂಗಾತಿಗಳು. ಪುಸ್ತಕ ಸಂಸ್ಕೃತಿಗಿಂತ ಮಿಗಿಲಾದದ್ದು ಬೇರೊಂದಿಲ್ಲ. ಆದ್ದರಿಂದ, ಪುಸ್ತಕ ಓದುವ ಹವ್ಯಾಸ ಒಳ್ಳೆಯ ಬೆಳವಣಿಗೆಗೆ ಕಾರಣವಾಗುತ್ತದೆ. ಇದರಿಂದ ಉತ್ತಮ ಸಂಸ್ಕೃತಿಗೆ ನಾಂದಿ. ನಾಳಿನ ಅಭಿವೃದ್ಧಿಯ ಪ್ರೇರಕ.

ಹಿರಿಯಕ್ಕನ ಚಾಳಿ ಮನೆಮಕ್ಕಳಿಗೆಲ್ಲಾ ಅಂದ ಹಾಗೆ ಮನೆಯಲ್ಲಿ ದೊಡ್ಡವರಾದವರು ಈ ಹವ್ಯಾಸವನ್ನು ರೂಢಿಸಿಕೊಂಡರೆ ಮಿಕ್ಕವರೆಲ್ಲ ಅದೇ ಬೆಳವಣಿಗೆಯಲ್ಲಿ ಮುಂದುವರಿಯುವುದು ಸಹಜ. ನಾಳಿನ ಸಮಾಜದ ಅಭಿವೃದ್ಧಿಯಲ್ಲಿ ಇದರ ಪಾತ್ರ ಬಹುಮುಖ್ಯವಾದ ಅಂಶ.

ಪುಸ್ತಕ ಎಂದೊಡನೆ ಜ್ಞಾನದ ಅರಿವಿನ ಆಗರ ನಮ್ಮ ಮುಂದೆ ಬಂದು ನಿಲ್ಲುವುದು ಸಹಜ. ಹಿಂದೆ ಪುಸ್ತಕಗಳ ಅಂದ ಹೇಗಿತ್ತೆಂದರೆ, ಪುಸ್ತಕಗಳನ್ನು ಮುಟ್ಟಿದ ಮೇಲೆ ಕೈತೊಳೆದುಕೊಳ್ಳಬೇಕಿತ್ತು. ಆದರೆ ಈಗ ಅದು ಬದಲಾಗಿದೆ. ಈಗಿನ ಕಾಲದಲ್ಲಿ ಹೇಳುವುದಾದರೆ ಪುಸ್ತಕಗಳನ್ನು ಮುಟ್ಟುವ ಮುನ್ನ ಕೈ ತೊಳೆದು ಮುಟ್ಟಬೇಕು. ಅಂದರೆ ಅಷ್ಟರಮಟ್ಟಿಗೆ ತಂತ್ರಜ್ಞಾನದ ಬೆಳೆದಿದೆ. ಇದರಿಂದ ಪುಸ್ತಕಗಳ ಮಾರಾಟ ಹೆಚ್ಚಾಗುತ್ತದೆ ಎಂಬುದು ಸತ್ಯಕ್ಕೆ ಹತ್ತಿರವಾದ ಮಾತು. ಕಾರಣ ಇಷ್ಟೇ: ಪುಸ್ತಕ ಆಕರ್ಷಕವಾದ ಮುಖಪುಟದೊಂದಿಗೆ ಒಳ್ಳೆಯ ಕಾಗದ ಬಳಕೆಯಿಂದ ಮುದ್ರಣವಾಗಿದ್ದರೆ ಅದನ್ನು ಓದುಗ ಕೈಗೆತ್ತಿಕೊಳ್ಳುತ್ತಾನೆ. ಹೀಗೆ ಕೈಗೆತ್ತಿಕೊಂಡರೆ ಆ ಪುಸ್ತಕ ಅರ್ಧ ಸೇಲ್ ಆದ ಹಾಗೆ. ಉಳಿದರ್ಧ ಅದರ ಒಳಗಿನ ಹೂರಣವನ್ನು ಒಳಗೊಂಡಿರುತ್ತದೆ. ಇದು ಪುಸ್ತಕ ಪ್ರಕಾಶಕರು ಮಾರಾಟದ ವ್ಯವಸ್ಥೆಯನ್ನು ಉತ್ತಮಗೊಳಿಸಲು ಕೈಗೊಳ್ಳಬೇಕಾದ ಕ್ರಮ ಮತ್ತು ಗಮನಿಸಬೇಕಾದ ಅತಿ ಮುಖ್ಯ ಸಂಗತಿ.

ಪುಸ್ತಕ ಮಾರುಕಟ್ಟೆಗೆ ಬಂದ ಬಗ್ಗೆ ಮಾಹಿತಿ ಓದುಗರಿಗೆ ತಲಪಬೇಕಾಗಿರುವುದು ಬಹು ದೊಡ್ಡ ವಿಚಾರ. ಇದರ ಅಗತ್ಯತೆಗಾಗಿ ಪತ್ರಿಕೆಗಳಿಗೆ ಕೊಡುವುದು, ಅದರ ಬಗ್ಗೆ ವಿಮರ್ಶೆ ಅಥವಾ ಪರಿಚಯ ಬರುವ ಹಾಗೆ ಮಾಡುವುದು, ಜೊತೆಗೆ ಸಾಕಷ್ಟು ಪ್ರಮಾಣದಲ್ಲಿ ಮಾದರಿ ಪ್ರತಿಗಳೊಂದಿಗೆ ಪುಸ್ತಕ ವಿತರಕರನ್ನು ಸಂಪರ್ಕಿಸಿ ಅವರ ಮೂಲಕ ಪುಸ್ತಕಗಳು ಓದುಗರಿಗೆ ಸಕಾಲಕ್ಕೆ ತಲಪುವಂತೆ ಮಾಡುವುದು. ಅಲ್ಲದೆ ಸಿದ್ಧವಾದ ಪುಸ್ತಕಗಳಲ್ಲಿ ಎಲ್ಲವನ್ನಲ್ಲದಿದ್ದರೂ ಕೆಲವನ್ನಾದರೂ ಬಿಡುಗಡೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಆ ದಿನದಂದು ಅವನ್ನು ರಿಯಾಯಿತಿ ದರದಲ್ಲಿ ಓದುಗರಿಗೆ ಪೂರೈಸುವುದು ಹಾಗೂ ಪತ್ರಿಕೆಗಳಲ್ಲಿ ಆ ಪುಸ್ತಕದ ಬಗ್ಗೆ ಮಾಹಿತಿ ಬರುವಂತೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವುದು. ಇವುಗಳ ಜೊತೆಗೆ ಓದುಗರಿಗೆ ಅಗತ್ಯವಾದ ಪುಸ್ತಕಗಳನ್ನು ಪ್ರಕಟಿಸುವುದು ಪ್ರಕಾಶಕರ ಜವಾಬ್ದಾರಿಯ ಕೆಲಸವಾಗಿದೆ.

ಟಿ.ವಿ. ಬಂದ ಮೇಲೆ ಓದುವ ಅಭಿರುಚಿ ಕಡಿಮೆ ಎನ್ನುವುದು ತಪ್ಪು. ನಿಜವಾಗಿಯೂ ಹೇಳಬೇಕಾದರೆ ಪುಸ್ತಕ ಓದಿದಾಗ ಸಿಗುವ ತೃಪ್ತಿ ಟಿ.ವಿ. ನೋಡಿದಾಗ ಸಿಗುವುದಿಲ್ಲ. ಅದು ಕಾಲ್ಪನಿಕ, ಆದರೆ ಇದು ಅರಗಿಸಿಕೊಳ್ಳಬಹುದಾದ

ಸತ್ವಭರಿತ ಆಹಾರ. ಹಾಗಾಗಿ ಓದು ಒಳ್ಳೆಯ ಹವ್ಯಾಸ. ನೀವೂ ಓದಿ; ಬೇರೆಯವರನ್ನೂ ಓದುವಂತೆ ಪ್ರೇರೇಪಿಸಿ.ಬೆಲೆ ನಿರ್ಣಯ ಎಲ್ಲರಿಗೂ ಓದುವ ಹಂಬಲವಿದೆ. ಆದರೆ ಕೆಲವೊಮ್ಮೆ ತನಗೆ ಬೇಕಾದ ಪುಸ್ತಕವನ್ನು ಕೊಂಡುಕೊಳ್ಳಲು ನಿರ್ಧರಿಸಿ ಪುಸ್ತಕದಂಗಡಿಗೆ ಹೋದಾಗ ಅದರ ಬೆಲೆಯನ್ನು ನೋಡಿ ಬೇಸರದಿಂದ ಹೊರನಡೆಯುವ ಪ್ರಸಂಗವೂ ಇದೆ. ಕಾರಣ ಇಷ್ಟೆ. ಪ್ರಕಾಶಕರಾದವರು ಓದುಗರಿಗೆ ಬೇಕಾದ ಪುಸ್ತಕಗಳನ್ನು ಪ್ರಕಟಿಸುವ ಜೊತೆಗೆ ಅವುಗಳನ್ನು ಪುಸ್ತಕಪ್ರಿಯರಿಗೆ ತಲಪಿಸುವಾಗಲೂ ಅಷ್ಟೇ ಜಾಗ್ರತೆಯಿಂದ ಬೆಲೆನಿಗದಿಗೊಳಿಸಬೇಕಾಗುತ್ತದೆ. ಇದೇ ನಾವು ಅಂದರೆ ಪ್ರಕಾಶಕರಾದವರು ಓದುಗರಿಗೆ ನಿಜವಾಗಿಯೂ ನೀಡುವ ಉತ್ತೇಜನ. ಕನ್ನಡ ಪುಸ್ತಕೋದ್ಯಮದ ಬೆಳವಣಿಗೆಗೆ ಕೊಡುವ ಕೊಡುಗೆ.

**ಮಾಧ್ಯಮಗಳ ಮೂಲಕ ಪ್ರಚಾರ**

ಆಗತಾನೆ ಬಂದಂತಹ ಹೊಸ ಪುಸ್ತಕಗಳನ್ನು ಮಾಧ್ಯಮಗಳ ಮೂಲಕ ಅಂದರೆ ಆಕಾಶವಾಣಿ, ದೂರದರ್ಶನ ಹಾಗೂ ಇನ್ನಿತರ ಮಾಧ್ಯಮಗಳ ಮೂಲಕ ಪ್ರಚಾರ ಬರುವಂತೆ ಏರ್ಪಾಡು ಮಾಡುವುದು. ಹಾಗೆಯೇ ದೂರದರ್ಶನ ಹಾಗೂ ಇನ್ನಿತರ ಟಿ.ವಿ. ಚಾನಲ್‌ಗಳಲ್ಲಿ ರಸಪ್ರಶ್ನೆ ಕಾರ್ಯಕ್ರಮ (Quiz Time) ಗಳನ್ನು ಪುಸ್ತಕಕ್ಕೆ ಸಂಬಂಧಿಸಿದಂತಹ ಪ್ರಶ್ನೆಗಳೊಂದಿಗೆ ಏರ್ಪಡಿಸುವುದು, ಅಲ್ಲದೆ ಅಂತಹ ಕಾರ್ಯಕ್ರಮಗಳಲ್ಲಿ ಗೆದ್ದವರಿಗೆ ಬಹುಮಾನವಾಗಿ ಪುಸ್ತಕಗಳನ್ನೇ ಉಡುಗೊರೆಯಾಗಿ ಕೊಡುವುದು, ಸಾಹಿತಿಗಳೊಂದಿಗೆ ಸಂವಾದ ಕಾರ್ಯಕ್ರಮಗಳಲ್ಲಿ ಪುಸ್ತಕಗಳ ಮಹತ್ವವನ್ನು ಕುರಿತು ಚರ್ಚಿಸುವುದು. ಹೀಗೆ ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ಮಾಧ್ಯಮಗಳ ಮೂಲಕವೂ ಪ್ರಚಾರಗಿಟ್ಟಿಸಿಕೊಂಡಲ್ಲಿ ಪುಸ್ತಕೋದ್ಯಮದ ಅಭಿವೃದ್ಧಿಗೆ ಸಹಕಾರಿಯಾಗಬಲ್ಲದು.

**ಗ್ರಂಥಾಲಯ-ಪ್ರಕಾಶಕ-ಓದುಗ**

ಇದೊಂದು ಆಶ್ಚರ್ಯಕರ ಸಂಗತಿ ಜೊತೆಗೆ ಅವಮಾನದ ಸಂಗತಿ ಕೂಡ. ಕಾರಣ ಕೆಲವು ಪ್ರಕಾಶಕರು ಸಾರ್ವಜನಿಕ ಗ್ರಂಥಾಲಯಗಳಿಗೆ ಮಾತ್ರ ಮೀಸಲಾಗಿ ಪುಸ್ತಕಗಳನ್ನು ಪ್ರಕಟಿಸಿ ಗ್ರಂಥಾಲಯಗಳ ಮೊರೆಹೊಕ್ಕು ಅವುಗಳನ್ನು ಅಲ್ಲಿಗೆ ಸಾಗಿಸುವಲ್ಲಿ ಮಾತ್ರ ನಿರತರು. ಸದರಿ ಪ್ರಕಾಶಕರಿಗೆ ಮಾರುಕಟ್ಟೆಯ ಅವಶ್ಯಕತೆ ಬೇಕಾಗಿಲ್ಲ. ಈ ದೃಷ್ಟಿಯಿಂದ ಪುಸ್ತಕೋದ್ಯಮ ವ್ಯಾಪಾರವಾಗಿ ಪರಿಣಮಿಸಿದೆ. ಇದು ತಪ್ಪಬೇಕಾಗಿದೆ. ಈ ನಿಟ್ಟಿನಲ್ಲಿ ಪ್ರಕಾಶಕರೆಲ್ಲರೂ ಒಟ್ಟುಗೂಡಿ ಕೆಲಸಮಾಡಬೇಕಿದೆ. ಯಾವುದೇ ಪ್ರಕಾಶಕರು ಪ್ರಕಟಿಸಿದ ಪುಸ್ತಕಗಳಾಗಲಿ ಅವು ಪ್ರಚಾರವಾಗಬೇಕಾದರೆ ಪುಸ್ತಕದಂಗಡಿ ತಲಪಬೇಕು. ಸಾಹಿತ್ಯ ಸಮ್ಮೇಳನ, ಪುಸ್ತಕ ಮೇಳ ಇನ್ನಿತರ ಪುಸ್ತಕ ಪ್ರದರ್ಶನಗಳಲ್ಲಿ ಇಟ್ಟು ಪ್ರದರ್ಶಿಸಿದಾಗಲೇ ಓದುಗರಿಗೆ ಆ ಪುಸ್ತಕದ ಬಗ್ಗೆ ಮಾಹಿತಿ ತಿಳಿಯುವುದು ಎಲ್ಲಾ ಓದುಗರು ಗ್ರಂಥಾಲಯವನ್ನು ಅವಲಂಬಿಸಲು ಸಾಧ್ಯವಾಗುವುದಿಲ್ಲ. ಸಮಯದ ಅಭಾವದಿಂದಲೊ ಅಥವಾ ಕಾರ್ಯದ ಒತ್ತಡದಿಂದಲೊ ಅದು ಸಾಧ್ಯವಾಗದಿರಬಹುದು. ಇದೇ ಗ್ರಂಥಾಲಯದ ಬಗ್ಗೆ ಇನ್ನೊಂದು ದೃಷ್ಟಿಯಲ್ಲಿ ಹೇಳುವುದಾದರೆ ಕೆಲವೇ ಪ್ರಕಾಶಕರು ಪ್ರಕಟಿಸಿದ ಪುಸ್ತಕಗಳು ಮಾತ್ರ ಅಲ್ಲಿ ಲಭ್ಯವಿದ್ದು, ಅವನ್ನು ಓದುಗ ಗಮನಿಸಿದಾಗ ಅವನಿಗೆ ಬೇಕಾದ ಸಾಹಿತಿಯ ಅಥವಾ ಸಾಹಿತ್ಯ ಸಿಗದಿದ್ದ ಪಕ್ಷದಲ್ಲಿ ಅವನು ಗ್ರಂಥಾಲಯದ ಬಗ್ಗೆ ವಿಶ್ವಾಸವನ್ನು ಕಳೆದುಕೊಳ್ಳುವ ಸಾಧ್ಯತೆಯು ಉಂಟಾಗಬಹುದು. ಓದುಗ ಒಂದು ಬಾರಿ ಎಲ್ಲಿಯಾದರೂ ಪುಸ್ತಕವನ್ನು ನೋಡಿದರೆ ಅದನ್ನು ಇನ್ನೆಲ್ಲಿಯಾದರೂ ಖರೀದಿಸಬಹುದು. ಒಟ್ಟಿನಲ್ಲಿ ಪುಸ್ತಕ ಓದುವ ಗೀಳನ್ನು ಹುರಿದುಂಬಿಸುವುದು ಪ್ರಕಾಶಕರ ಪಾತ್ರವಾಗಬೇಕು. ಅದನ್ನು ಬಿಟ್ಟು ಕೇವಲ ಗ್ರಂಥಾಲಯಗಳನ್ನು



ಅವಲಂಬಿಸಿರುವ ಪ್ರಕಾಶಕರು ಪ್ರಕಾಶಕರೇ ಅಲ್ಲ. ತಮಿಳು, ಮಲಯಾಳಂ ಹಾಗೂ ಇನ್ನಿತರ ಭಾಷೆಗಳಲ್ಲಿ ಪ್ರಕಟವಾದ ಪುಸ್ತಕಗಳನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ಓದುಗರು ಖರೀದಿಸುತ್ತಾರೆ. ಹಾಗೆಯೇ ಕನ್ನಡದಲ್ಲಿಯೂ ಆಗಬೇಕು. ಪ್ರಕಾಶಕರು ಓದುಗರಿಗೆ ಪುಸ್ತಕಗಳನ್ನು, ಈಗಿನ ಮಾರುಕಟ್ಟೆಯನ್ನು ಅರಿತು ಸಾಹಿತಿಗಳ ಮೂಲಕ ಅವುಗಳನ್ನು ಸಿದ್ಧಪಡಿಸಿ ಪ್ರಕಟಿಸಬೇಕಾಗುತ್ತದೆ. ಇದರಿಂದ ಓದುಗರ ಸಂಖ್ಯೆ ಹೆಚ್ಚುವುದರಲ್ಲಿ ಸಂಶಯವಿಲ್ಲ.

**ಸರ್ಕಾರದಿಂದ ಸವಲತ್ತು.**

ಪ್ರಕಟಿಸಿದ ಪ್ರತಿ ಪುಸ್ತಕವೂ ಓದುಗರ ಕೈಸೇರಬೇಕಾದರೆ ಇಲ್ಲಿ ಸರ್ಕಾರದ ಪಾತ್ರ ಅತಿ ಮುಖ್ಯ. ಕಾರಣ ಪ್ರಕಾಶಕರಿಗೆ ಕಡಿಮೆ ಬೆಲೆಯಲ್ಲಿ ಮುದ್ರಣ ಕಾಗದವನ್ನು ನೀಡುವುದು ಮತ್ತು ಪ್ರಕಟಿಸಿದಂತಹ ಪುಸ್ತಕಗಳಲ್ಲಿ ಈಗಿರುವ ಸವಲತ್ತಿಗಿಂತ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಪ್ರತಿಗಳನ್ನು ನೇರವಾಗಿ ಪ್ರಕಾಶಕರಿಂದ ಖರೀದಿಸಿ ಗ್ರಂಥಾಲಯಗಳಿಗೆ ನೀಡುವುದು. ಇದರಿಂದ ಆಯಾ ಸಾಲಿನಲ್ಲಿ ಪ್ರಕಟವಾದ ಪುಸ್ತಕಗಳು ಸುಲಭವಾಗಿ ಓದುಗರಿಗೆ ದೊರೆಯುವಂತಾಗುತ್ತದೆ. ಇದರಿಂದ ಅಷ್ಟು ಪ್ರಮಾಣದ ಹೊರೆ ಕಡಿಮೆಯಾಗುತ್ತದೆ. ಹಾಗಾಗಿ ಇನ್ನಷ್ಟು ಹೆಚ್ಚು ಪುಸ್ತಕಗಳನ್ನು ಪ್ರಕಟಿಸಲು ಸಹಾಯಕವಾಗುತ್ತದೆ. ಇದರ ಜೊತೆಗೆ ಸರ್ಕಾರದ ಅಂಗಸಂಸ್ಥೆಯಾದ ಪುಸ್ತಕ ಪ್ರಾಧಿಕಾರದ ವತಿಯಿಂದ ಎಲ್ಲಾ ತಾಲ್ಲೂಕು ಮಟ್ಟಗಳಲ್ಲಿ ಪುಸ್ತಕದಂಗಡಿ ತೆರೆಯಲು ಸಹಾಯಕವಾಗುವುದು. ಹೀಗೆ ಪ್ರಕಾಶಕರು ಪ್ರಕಟಿಸಿದಂತಹ ಪುಸ್ತಕಗಳಿಗೆ ಯಾವುದೇ ರೀತಿಯಿಂದಲೂ ಹೊರೆಯಾಗದಂತೆ ನೋಡಿಕೊಂಡಲ್ಲಿ ಇನ್ನಷ್ಟು ಉತ್ತಮ ಪುಸ್ತಕಗಳು ಓದುಗರಿಗೆ ದೊರೆಯುವುದರಲ್ಲಿ ಸಂಶಯವಿಲ್ಲ.

**ಪುಸ್ತಕೋದ್ಯಮಕ್ಕೆ ಉತ್ತೇಜನ ನೀಡಲು ಇನ್ನಿತರ ಕೆಲವು ಸಲಹೆಗಳು :**

ಒಂದೇ ವಿಷಯವಿರುವ ಹಲವು ಪುಸ್ತಕಗಳ ಪ್ರಕಟಣೆ ಮರುಕಳಿಸದಂತೆ ಜಾಗ್ರತೆ ವಹಿಸಲು ಪ್ರಕಾಶಕರು ಪರಸ್ಪರ ಸೌಹಾರ್ದಯುತವಾದ ಸಂಪರ್ಕವನ್ನು ಬೆಳೆಸುವುದು. ಆಲೋಚಿಸುವುದು ಸೂಕ್ತವಾದ ಸಂಗತಿ ಎಂಬುದು ನನ್ನ ಅನಿಸಿಕೆ. ಮಾರುಕಟ್ಟೆ ದೃಷ್ಟಿಯಿಂದಲೂ ಇದು ಬಹು ಮುಖ್ಯವಾದ ಸಂಗತಿ.

ಪ್ರಕಾಶಕರ ಕುಂದುಕೊರತೆಗಳ ಬಗ್ಗೆ ಅವರಿಗೆ ಕಾನೂನು ಸಲಹೆ ನೀಡಲು ಪ್ರಸ್ತುತ ಕನ್ನಡ ಪುಸ್ತಕ ಪ್ರಾಧಿಕಾರದಲ್ಲಿ ಒಂದು ಕಾನೂನು ಘಟಕ (Legal Cell) ಸ್ಥಾಪಿಸುವುದು ಅತ್ಯವಶ್ಯಕ.



# ಕನ್ನಡ ಪುಸ್ತಕ ನೀತಿ

**೧. ಇದನ್ನು 'ಕನ್ನಡ ಪುಸ್ತಕ ನೀತಿ' ಎಂದು ಕರೆಯಬೇಕು.**

**೨. ಪೀಠಿಕೆ**

ಪುಸ್ತಕ ನಾಡಿನ ಸಂಸ್ಕೃತಿಯ ಪ್ರತೀಕ. ಪುಸ್ತಕ ನಮ್ಮ ನಾಗರಿಕತೆಯ ತಳಹದಿ. ಜ್ಞಾನಾರ್ಜನೆಗೆ ಅಕ್ಷರ ಮಾಧ್ಯಮ ಒಂದು ಪ್ರಮುಖ ಸಾಧನ. ಅನುಭವ, ಜ್ಞಾನದ ಅಭಿವ್ಯಕ್ತಿರೂಪವಾದ ಪುಸ್ತಕ ಸಂಸ್ಕೃತಿಯ ನಿರಂತರ ಪ್ರವಾಹಕ್ಕೆ ಸೇತುವೆ. ತಲೆಮಾರುಗಳ ಮಾನವ ಜ್ಞಾನ ಮತ್ತು ಅನುಭವಗಳು ಉಳಿದುಬಂದಿರುವುದೆ ಲಿಖಿತ ಮಾಧ್ಯಮದ ಮೂಲಕ. ಪುಸ್ತಕ ಜ್ಞಾನ ವಿತರಣೆಯ ಮಾಧ್ಯಮವು ಹೌದು. ಎಲ್ಲರಿಗೂ ಪುಸ್ತಕದಿಂದ ಜ್ಞಾನ ಲಭ್ಯ.

ಹತ್ತೊಂಬತ್ತನೇ ಶತಮಾನದಲ್ಲಿ ಆರಂಭವಾದ ಕನ್ನಡ ಪುಸ್ತಕ ಪ್ರಕಟಣೆಯು ಇಂದು ಒಂದು ಬೃಹತ್ ವ್ಯಾಪಾರವಾಗಿ ಬೆಳೆದಿದೆ. ಎಲ್ಲ ವಾಣಿಜ್ಯ ಕ್ಷೇತ್ರದ ಉತ್ಪನ್ನಕ್ಕೂ ಒಂದು ನೀತಿ ಸಂಹಿತೆ ಅಗತ್ಯ. ಅದರಂತೆ ಪುಸ್ತಕ ಕ್ಷೇತ್ರಕ್ಕೂ ಒಂದು ನೀತಿಯನ್ನು ರೂಪಿಸುವುದು ಅಗತ್ಯವೆಂದು ಭಾವಿಸಲಾಗಿದೆ.

ಲೇಖಕರ ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರಕಾಶನ ಉದ್ಯಮಕ್ಕೆ ನೆರವು, ಓದುಗನಿಗೆ ಸುಲಭ ಬೆಲೆಯಲ್ಲಿ ಅತ್ಯುತ್ತಮ ರೀತಿಯಲ್ಲಿ ಪ್ರಕಟಗೊಂಡ ಪುಸ್ತಕ ಬೇಕೆಂದೆಡೆ ದೊರೆಯುವ ಸೌಲಭ್ಯಗಳು ಈ ನೀತಿಯ ಮೂಲ ಆಶಯಗಳಾಗಿರಬೇಕೆಂದು ನಿರೀಕ್ಷಿಸಲಾಗಿದೆ.

**೩. ಧ್ಯೇಯೋದ್ದೇಶಗಳು**

ಅ. ಪುಸ್ತಕಗಳನ್ನು ಒಂದು ಸಾಂಸ್ಕೃತಿಕ-ಆರ್ಥಿಕ ವಲಯದ ಉತ್ಪನ್ನಗಳೆಂದು ಪರಿಗಣಿಸುವುದು.

ಆ. ರಾಜ್ಯದ ವೈವಿಧ್ಯಮಯ ಸಾಂಸ್ಕೃತಿಕ ಪರಂಪರೆ ಮತ್ತು ಸಂಪತ್ತನ್ನು ಜನತೆ ಅರಿಯಲು ನೆರವಾಗುವಂತೆ ಓದುವಿಕೆಯನ್ನು ಪ್ರಚುರಪಡಿಸುವುದು.

ಇ. ಪುಸ್ತಕಗಳ ರಚನೆಗೆ ಅಗತ್ಯವಾದ ವಾತಾವರಣವನ್ನು ನಿರ್ಮಿಸಿ ಪ್ರೋತ್ಸಾಹ ನೀಡುವುದು.

ಈ. ಕನ್ನಡದಲ್ಲಿ ಲೇಖಕ-ಪ್ರಕಾಶಕ-ಓದುಗರ ನಡುವೆ ಉತ್ತಮ ಸಂಬಂಧವನ್ನು ಏರ್ಪಡಿಸಿ ಓದುಗರಲ್ಲಿ ಉತ್ತಮ ವಾಚನಾಭಿರುಚಿಯನ್ನು ಬೆಳೆಸಿ ರಾಜ್ಯಾದ್ಯಂತ ಓದುಗರಿಗೆ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು.

ಉ. ಕನ್ನಡದಲ್ಲಿ ಪುಸ್ತಕೋದ್ಯಮವು ಜನಪರವಾಗಿ, ಸಮಗ್ರ ಚಳುವಳಿಯಾಗಿ ಬೆಳೆದು ಭದ್ರವಾಗಿ ನೆಲೆಯೂರುವಂತೆ ಮಾಡುವುದು.

ಊ. ಅಂತರರಾಷ್ಟ್ರೀಯ ಪುಸ್ತಕ ಪ್ರಕಟಣಾ ಪ್ರಪಂಚ ಒಡ್ಡುತ್ತಿರುವ ಪೈಪೋಟಿಯನ್ನು ಸಮರ್ಥವಾಗಿ ಎದುರಿಸಲು ಕನ್ನಡ ಪ್ರಕಾಶನ ಉದ್ಯಮವನ್ನು ಸಜ್ಜುಗೊಳಿಸುವುದು; ಅಗತ್ಯವಿದ್ದಲ್ಲಿ ನೆರವಾಗುವುದು.

### ೪. ಪುಸ್ತಕ ನೀತಿಯ ವ್ಯಾಪ್ತಿ

ಈ ನೀತಿಯು ಎಲ್ಲಾ ಕನ್ನಡ ಪುಸ್ತಕಗಳಿಗೆ ಹಾಗೂ ತುಳು, ಕೊಂಕಣಿ ಮತ್ತು ಕೊಡವ ಭಾಷೆಗಳಲ್ಲಿ ಪ್ರಕಟವಾಗುವ ಪುಸ್ತಕಗಳಿಗೆ ಅನ್ವಯವಾಗುತ್ತದೆ.

### ೫. ಕನ್ನಡ ಪುಸ್ತಕೋದ್ಯಮ ಇಂದು

ದಾನಚಿಂತಾಮಣಿ ಅತ್ತಿಮಬ್ಬೆ ಶಾಂತಿ ಪುರಾಣದ ಒಂದು ಸಾವಿರ ಪ್ರತಿಗಳನ್ನು ತಯಾರಿಸಿ ದಾನ ಮಾಡಿದಂದೇ ಕನ್ನಡದಲ್ಲಿ ಪ್ರಕಾಶನ ಕ್ಷೇತ್ರವು ಹುಟ್ಟಿತ್ತೆಂದು ಹೇಳಬಹುದು. ೧೮೧೭ರಲ್ಲಿ ಕಲ್ಕತ್ತಾದ ಶ್ರೀರಾಮಪುರದಲ್ಲಿ ಪ್ರಕಟವಾದ 'ವಿಲಿಯಂ ಕೇರಿ' ಎಂಬುವವರು ರಚಿಸಿದ 'ಗ್ರ್ಯಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್ವೇಜ್' ಕನ್ನಡದ ಪ್ರಥಮ ಮುದ್ರಿತ ಪುಸ್ತಕ ಎನ್ನಲಾಗುತ್ತದೆ. ಬೆಂಗಳೂರಿನಲ್ಲಿ ವೆಸ್ಲಿಯನ್ ಪ್ರೆಸ್ ಹಾಗೂ ಮಂಗಳೂರಿನಲ್ಲಿ ಬಾಸಲ್ ಮಿಷನ್ ಪ್ರೆಸ್ ಹಾಗೂ ೧೮೪೪ರಲ್ಲಿ ಕನ್ನಡ ಅಚ್ಚುಮೊಳೆಗಳ ಮುದ್ರಣಾಲಯದ ಸ್ಥಾಪನೆಯೊಂದಿಗೆ ಕನ್ನಡ ಪುಸ್ತಕಗಳ ಪ್ರಕಟಣೆ ಆರಂಭಗೊಂಡಿತು. ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಂಘ (ಶಿವಮೊಗ್ಗ), ಕರ್ನಾಟಕ ಪ್ರಿಂಟಂಗ್ ಪ್ರೆಸ್ (ಧಾರವಾಡ), ಗೆಳೆಯರ ಗುಂಪು (ಧಾರವಾಡ) ಮೊದಲಾದ ಸಂಸ್ಥೆಗಳು ಕನ್ನಡ ಪ್ರಕಟಣೆಗಳನ್ನು ಆರಂಭಿಸಿದವು. ನಂತರ ನೂರಾರು, ಆನಂತರ ಸಹಸ್ರಾರು ಪ್ರಕಾಶನ ಸಂಸ್ಥೆಗಳು ಇಂದು ಸಾವಿರಾರು ಕನ್ನಡ ಪುಸ್ತಕಗಳನ್ನು ಪ್ರಕಟಿಸುತ್ತಲಿವೆ.

ಇಂದು ಕನ್ನಡದಲ್ಲಿ ಪ್ರತಿವರ್ಷ ದಾಖಲಾಗುವ ಮೊದಲ ಆವೃತ್ತಿಯ ಸುಮಾರು ೩೫೦೦ ಪುಸ್ತಕಗಳು, ಸಾವಿರಾರು ಮರುಮುದ್ರಣಗಳು ಹಾಗೂ ದಾಖಲಾಗದ ಸಾವಿರಾರು ಪುಸ್ತಕಗಳು ಪ್ರಕಟಣೆಗೊಳ್ಳುತ್ತಲಿವೆ. ಕನ್ನಡ ಪ್ರಕಟಣಾ ಪ್ರಪಂಚ ವಿಸ್ತಾರಗೊಂಡಿದೆ; ಅಂತೆಯೇ ಅನೇಕ ಸಮಸ್ಯೆಗಳು ತಲೆದೋರುತ್ತಲಿವೆ.

ಲೇಖಕರಿಗೆ ತಾವು ಬರೆದ ಕೃತಿಗಳಿಗೆ ಪ್ರಕಾಶಕ ದೊರೆಯದ ಸಮಸ್ಯೆ, ರಾಯಧನ ನಿಗದಿ, ಪ್ರಕಾಶಕರಿಗೆ ಹಣಕಾಸು ತೊಂದರೆ, ಪ್ರಕಟಿತ ಪುಸ್ತಕಗಳ ವಿತರಣೆ ಮತ್ತು ಮಾರಾಟ ಸಮಸ್ಯೆ, ಪುಸ್ತಕ ಮಾರಾಟಗಾರರಿಗೆ ಉತ್ತಮ ವಾಣಿಜ್ಯ ಸ್ಥಳಾವಕಾಶದ ಕೊರತೆ, ಓದುಗರಿಗೆ ತಮಗೆ ಬೇಕಾದ ಪುಸ್ತಕಗಳು ಸರಿಯಾದ ಬೆಲೆಗೆ ಬೇಕೆಂದೆಡೆ ದೊರೆಯದ ಸಮಸ್ಯೆ – ಹೀಗೆ ಕನ್ನಡ ಪ್ರಕಾಶನ ಕ್ಷೇತ್ರ ಅನೇಕ ಸಮಸ್ಯೆಗಳಿಗೆ ಗುರಿಯಾಗಿರುತ್ತದೆ. ಪರಿಣಾಮವಾಗಿ, ಕನ್ನಡ ಪುಸ್ತಕ ಸಂಸ್ಕೃತಿಯು ಆರೋಗ್ಯಕಾರಿ ವಾತಾವರಣದಲ್ಲಿ ಬೆಳೆಯುತ್ತಿಲ್ಲವೆನ್ನಬಹುದಾಗಿದೆ.

ಆದ್ದರಿಂದ ಲೇಖಕ–ಪ್ರಕಾಶಕ–ಮಾರಾಟಗಾರರ ಹಾಗೂ ಓದುಗರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮತ್ತು ಕನ್ನಡ ಪುಸ್ತಕೋದ್ಯಮದ ಸರ್ವತೋಮುಖ ಅಭಿವೃದ್ಧಿಗೆ ಕನ್ನಡ ಪುಸ್ತಕ ನೀತಿ ಅತ್ಯಗತ್ಯವಾಗಿದೆ.

### ೬. ಪುಸ್ತಕ ರಚನೆ

ಅ. ಪುಸ್ತಕ ರಚನೆಗೆ ಸೂಕ್ತ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕು.
ಆ. ಪುಸ್ತಕದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ ಕಾರ್ಯಾಗಾರ, ಕಮ್ಮಟಗಳನ್ನು ಏರ್ಪಡಿಸಬೇಕು.
ಇ. ಲೇಖಕ–ಪ್ರಕಾಶಕರ ನಡುವೆ ತಪ್ಪದೆ ಲಿಖಿತ ಒಪ್ಪಂದ ಮಾಡಿಕೊಳ್ಳಬೇಕು.
ಈ. ಪ್ರಕಾಶಕರು – ಲೇಖಕರಿಗೆ ಕರಾರು ಮಾಡಿಕೊಂಡಂತೆ ನಿರ್ದಿಷ್ಟ ಸಂಭಾವನೆ ಹಾಗೂ ಗೌರವ ಪ್ರತಿ ನೀಡಬೇಕು.
ಉ. ಪುಸ್ತಕ ಪ್ರಾಧಿಕಾರ, ಅಕಾಡೆಮಿಗಳು, ಪ್ರಸಾರಾಂಗಗಳು ಲೇಖಕರ ಕೃತಿಗಳನ್ನು ಪ್ರಕಟಿಸಿದಾಗ ಕೃತಿಸ್ವಾಮ್ಯ ಆಯಾ ಲೇಖಕರದ್ದಾಗಿರಬೇಕು. ಆ ಆವೃತ್ತಿ ಮಾತ್ರ ಪ್ರಕಾಶಕರಿಗೆ ಸೀಮಿತವಾಗಿರಬೇಕು. ಮರುಮುದ್ರಣ ಮಾಡುವ ಸಂದರ್ಭದಲ್ಲಿ ಲೇಖಕರ ಲಿಖಿತ ಅನುಮತಿ ಪಡೆದೇ ಮುದ್ರಿಸಬೇಕು. ಹಾಗೆ ಲೇಖಕರೇ ಮರು ಮುದ್ರಿಸುವ ಸಂದರ್ಭದಲ್ಲಿ ಪ್ರಕಾಶಕ ಸಂಸ್ಥೆಗೆ ಮೊದಲೇ ಲಿಖಿತವಾಗಿ ತಿಳಿಸಬೇಕು.
ಊ. ಅನುವಾದಕ್ಕೆ, ಮರುಮುದ್ರಣಗಳಿಗೆ, ಚಿತ್ರೀಕರಣಕ್ಕೆ ಇನ್ನಿತರ ಯಾವುದೇ ಮಾಧ್ಯಮದ/ಬಗೆಯ ಬಳಕೆಗೆ ಲೇಖಕರಿಗೆ ಮಾತ್ರ ಹಕ್ಕುಸ್ವಾಮ್ಯವಿರಬೇಕು.

ಋ. ಸರ್ಕಾರಿ ಸ್ವಾಯತ್ತ ಸಂಸ್ಥೆಗಳು ಪ್ರಕಾಶಕರಾಗಿದ್ದಾಗ ಸಂಪಾದನೆ, ಅನುವಾದ, ಸಂಗ್ರಹ ಇತ್ಯಾದಿ ಕೃತಿಗಳಿಗೆ ಸಂಬಂಧಿಸಿದಂತೆ ಆಯಾ ಸಂಸ್ಥೆಗಳು ಏಕರೂಪದಲ್ಲಿ ಸೂಕ್ತ ಗೌರವಧನವನ್ನು ನಿಗದಿಪಡಿಸಬೇಕು.

ಎ. ಕಾಲಕಾಲಕ್ಕೆ ಗ್ರಂಥಸ್ವಾಮ್ಯ ಕಾನೂನಿಗೆ ಅನುಸಾರವಾಗಿ ಮಾಡಲಾದ ನಿಯಮಗಳು ಮತ್ತು ಬೌದ್ಧಿಕ ಸ್ವತ್ತು ಪರಿಭಾಷೆಗೆ ಸಂಬಂಧಿಸಿದ ನಿಯಮಗಳು ಅನ್ವಯವಾಗಬೇಕು.

ಏ. ಲೇಖಕರು ತಮ್ಮ ಹಸ್ತಪ್ರತಿಯನ್ನು ನೋಂದಾಯಿಸಿ, ನೋಂದಾವಣೆ ಸಂಖ್ಯೆಯನ್ನು ಮುದ್ರಿತ ಪುಸ್ತಕದಲ್ಲಿ ನಮೂದಿಸಬೇಕು.

**೭. ಪುಸ್ತಕದ ಪ್ರಕಟಣೆ**

ಅ. ಪುನರ್‌ಮುದ್ರಣದ ಕೃತಿಗಳಿಗೆ ಮುದ್ರಣ ವರ್ಷವನ್ನು ಕಡ್ಡಾಯವಾಗಿ ನಮೂದಿಸುವುದರ ಜೊತೆಗೆ ಮೊದಲ ಮುದ್ರಣ ವರ್ಷವನ್ನು ಹಾಗೂ ಎಷ್ಟನೇ ಆವೃತ್ತಿ ಎಂಬುದನ್ನು ತಪ್ಪದೇ ನಮೂದಿಸಬೇಕು.

ಆ. ಮರುಮುದ್ರಣದಲ್ಲಿ ಪುಸ್ತಕದ ಶೀರ್ಷಿಕೆಯನ್ನು ಬದಲಾಯಿಸಿದ್ದರೆ ಪೂರ್ವದ ಹೆಸರನ್ನು ಪೂರ್ಣಶೀರ್ಷಿಕೆಯ ಮೊದಲ ಪುಟದಲ್ಲಿ ಸೂಚಿಸಬೇಕು.

ಇ. ಪರಿಷ್ಕೃತ ಮುದ್ರಣವಾಗಿದ್ದಲ್ಲಿ ಮೊದಲ ಮುದ್ರಣದ ಶೀರ್ಷಿಕೆಯ ಹೆಸರನ್ನು ತಾಂತ್ರಿಕ ಪುಟದಲ್ಲಿ ಸೂಚಿಸಿ ಮೊದಲ ಮುದ್ರಣದ ವರ್ಷವನ್ನು ನಮೂದಿಸಿರಬೇಕು,

ಈ. ಮುದ್ರಿತ ಪ್ರತಿಗಳ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸಬೇಕು.

ಉ. ಕೃತಿಸ್ವಾಮ್ಯವನ್ನು ಸ್ಪಷ್ಟವಾಗಿ ನಮೂದಿಸಿರಬೇಕು.

ಊ. ಗ್ರಂಥಸ್ವಾಮ್ಯ ಪುಟದಲ್ಲಿ ಕಾಗದದ ಗುಣಮಟ್ಟ ಹಾಗೂ ಪುಸ್ತಕದ ಆಕಾರವನ್ನು ಖಚಿತವಾಗಿ ನೀಡಬೇಕು. ಉದಾ: ಎನ್.ಎಸ್. ಮ್ಯಾಪ್‌ಲಿಥೊ,

೮೦ ಜಿ.ಎಸ್.ಎಂ., ಡೆಮಿ ೧/೮ ಇತ್ಯಾದಿ.

ಋ. ಯಾವುದೇ ಸರ್ಕಾರಿ ಪ್ರಕಟಣೆಗಳಲ್ಲಿ ಪ್ರಕಾಶಕರ ಹೆಸರು ಮತ್ತು ಪದನಾಮವನ್ನು ನಮೂದಿಸಬೇಕು.

ಎ. ಎಲ್ಲಾ ವೃತ್ತಿನಿರತ ಪ್ರಕಾಶಕರು ಐ.ಎಸ್.ಬಿ.ಎನ್ ಸಂಸ್ಥೆಯಲ್ಲಿ ನೋಂದಣಿ ಮಾಡಿಸಿಕೊಂಡು, ಪ್ರತಿಯೊಂದು ಪುಸ್ತಕಕ್ಕೆ ಐ.ಎಸ್.ಬಿ.ಎನ್. ಸಂಖ್ಯೆ ನೀಡಬೇಕು.

**೮. ಪುಸ್ತಕ ಮಾರಾಟ**

ಅ. ರಾಜ್ಯಾದ್ಯಂತ ಕನ್ನಡ ಪುಸ್ತಕ ಮಾರಾಟ ಮೇಳಗಳನ್ನು ಏರ್ಪಡಿಸಬೇಕು.

ಆ. ರಾಜ್ಯಾದ್ಯಂತ ಸುಸಜ್ಜಿತವಾದ ಆಕರ್ಷಕ ಕನ್ನಡ ಪುಸ್ತಕ ಮಳಿಗೆಗಳನ್ನು ಸ್ಥಾಪಿಸಬೇಕು.

ಇ. ಲೇಖಕರಲ್ಲಿ ಆತ್ಮವಿಶ್ವಾಸ ಮೂಡಿಸಲು ಲೇಖಕ–ಪ್ರಕಾಶಕರಿಗೆ ಪ್ರತ್ಯೇಕವಾದ ಪುಸ್ತಕ / ಹಸ್ತಪ್ರತಿ ಮೇಳವನ್ನು ಏರ್ಪಡಿಸಬೇಕು.

ಈ. ಸರ್ಕಾರ, ಮಹಾನಗರಪಾಲಿಕೆಗಳು, ನಗರಪಾಲಿಕೆಗಳು, ಸಾರಿಗೆ ನಿಗಮಗಳು ಮೊದಲಾದ ಸರ್ಕಾರಿ / ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು ನಿರ್ಮಿಸುವ ವಾಣಿಜ್ಯ ಸಂಕೀರ್ಣ ಹಾಗೂ ಬಸ್ ನಿಲ್ದಾಣಗಳಲ್ಲಿ ಕನ್ನಡ ಪುಸ್ತಕ ಮಳಿಗೆಗಳನ್ನು ಸ್ಥಾಪಿಸಲು ರಿಯಾಯಿತಿ ದರದಲ್ಲಿ ಸ್ಥಳಾವಕಾಶ ಒದಗಿಸಬೇಕು.
ಉ.ಕನ್ನಡ ಪುಸ್ತಕ ಸಾಗಾಣಿಕೆಗೆ ರಾಜ್ಯದ ಸಾರಿಗೆ ಸಂಸ್ಥೆಗಳ ವಾಹನಗಳಲ್ಲಿ ರಿಯಾಯಿತಿ ದರದಲ್ಲಿ ಅವಕಾಶ ನೀಡಬೇಕು.

**೯. ನೋಂದಣಿ**

ಕನ್ನಡದಲ್ಲಿ ಪ್ರಕಟವಾಗುವ ಪ್ರತಿಯೊಂದು ಪುಸ್ತಕವನ್ನು ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಕಡ್ಡಾಯವಾಗಿ ನೋಂದಣಿ ಮಾಡಿಸಬೇಕು.

**೧೦. ಖರೀದಿ**

ಅ. ರಾಜ್ಯದಲ್ಲಿ ಪ್ರಕಟವಾಗುವ ಪ್ರತಿಯೊಂದು ಪುಸ್ತಕದ ಕನಿಷ್ಠ ಐದುನೂರು ಪ್ರತಿಗಳನ್ನು ಸರ್ಕಾರವು ಖರೀದಿಸಬೇಕು.

ಆ. ರಾಜ್ಯದಲ್ಲಿ ಪ್ರಕಟವಾಗುವ ಕನ್ನಡ ಪುಸ್ತಕಗಳನ್ನು ಖರೀದಿಸಲು ಸರ್ಕಾರವು ಒಟ್ಟಾರೆ ರೂ. ೫೦ ಕೋಟಿ ರೂಪಾಯಿಗಳ ಅನುದಾನವನ್ನು ಪ್ರತಿವರ್ಷ ಆಯವ್ಯಯದಲ್ಲಿ ಒದಗಿಸಬೇಕು.

ಇ. ರಾಜ್ಯದಲ್ಲಿ ಕನ್ನಡ ಪುಸ್ತಕಗಳ ಪ್ರಕಟಣೆಗಾಗಿ ಸರ್ಕಾರವು ಒಟ್ಟಾರೆ ರೂ. ೧೦ ಕೋಟಿ ರೂಪಾಯಿಗಳ ನೆರವನ್ನು ಆಯವ್ಯಯದಲ್ಲಿ ಮೀಸಲಿಡಬೇಕು.

ಈ. ಕನ್ನಡ ಪುಸ್ತಕಗಳ ವಿತರಣೆಗಾಗಿಯೇ ಒಂದು ವಿಶೇಷ ವ್ಯವಸ್ಥೆಯನ್ನು ಮಾಡಬೇಕು.

ಉ. ರಾಜ್ಯದ ಖಾಸಗಿ ಬೃಹತ್ ವ್ಯಾಪಾರ ಮಳಿಗೆಗಳಲ್ಲಿಯೂ ಕನ್ನಡ ಪುಸ್ತಕಗಳನ್ನು ಮಾರಾಟ ಮಾಡಲು ಅವಕಾಶ ಕಲ್ಪಿಸಿಕೊಡಬೇಕು.

### ೧೧. ಸಾಮಾನ್ಯ

ಅ. ಪ್ರತಿಯೊಂದು ಶಾಲೆ, ಕಾಲೇಜುಗಳು ಕನ್ನಡ ಪುಸ್ತಕಗಳನ್ನು ಒಳಗೊಂಡ ಸುಸಜ್ಜಿತ ಗ್ರಂಥಾಲಯದ ಸ್ಥಾಪನೆಗೆ ನೆರವು ನೀಡಬೇಕು.

ಆ. ಕನಿಷ್ಠ ಹತ್ತು ವರ್ಷ ಈ ಕ್ಷೇತ್ರದಲ್ಲಿ ದುಡಿದ ಅಧಿಕೃತ ಕನ್ನಡ ಪುಸ್ತಕ ಪ್ರಕಾಶಕರಿಗೆ ಸಬ್ಸಿಡಿ ದರದಲ್ಲಿ ಕಾಗದವನ್ನು ಪೂರೈಸಬೇಕು.

ಇ. ನಕಲಿ ಕನ್ನಡ ಪುಸ್ತಕ ಪ್ರಕಟಣೆ (ಪೈರಸಿ)ಯನ್ನು ಒಂದು ಸಂಜ್ಞೇಯ (Congnizable) ಅಪರಾಧ ಎಂದು ಪರಿಗಣಿಸಬೇಕು.

ಈ. ಓದುವ ಸಂಸ್ಕೃತಿಯನ್ನು ಬೆಳೆಸಲು ರಾಜ್ಯಾದ್ಯಂತ ಓದುಗರ ಕೂಟ (ರೀಡರ್ಸ್ ಕ್ಲಬ್)ಗಳನ್ನು ಸ್ಥಾಪಿಸಬೇಕು.

ಉ. ಅಂತರಜಾಲದಲ್ಲಿ ಪುಸ್ತಕ ಅಳವಡಿಕೆಗೆ ಹಾಗೂ ಇ-ಪ್ರಕಟಣೆಗೆ, ಸಾಮಾನ್ಯ ಪ್ರಕಟಣೆಗಳಿಗೆ ಅನ್ವಯವಾಗುವ ಎಲ್ಲಾ ನಿಯಮಗಳನ್ನು ಅನ್ವಯಿಸಬೇಕು.

ಊ. ಕನಿಷ್ಠ ಐದು ವರ್ಷಗಳಿಗೆ ಒಮ್ಮೆಯಾದರೂ ರಾಜ್ಯದಲ್ಲಿ ಕನ್ನಡ ಪುಸ್ತಕೋದ್ಯಮ ಕುರಿತು ಒಂದು ಸಮೀಕ್ಷೆಯನ್ನು ಏರ್ಪಡಿಸಬೇಕು.

ಋ. ಲೇಖಕರಾಗಲಿ, ಪ್ರಕಾಶಕರಾಗಲಿ, ಮಾರಾಟಗಾರರಾಗಲಿ ಮಾಡುವ ಯಾವುದೇ ತಪ್ಪು ಅಥವಾ ಅನೈತಿಕ ವ್ಯವಹಾರವನ್ನು ಪರಿಶೀಲಿಸಿ ತಪ್ಪು ಮಾಡುವ ಲೇಖಕ, ಪ್ರಕಾಶಕ, ಮಾರಾಟಗಾರರನ್ನು ಕನಿಷ್ಠ ಐದು ವರ್ಷಗಳವರೆಗೆ ಕಪ್ಪು ಪಟ್ಟಿಗೆ ಸೇರಿಸಬೇಕು. ಹಾಗೂ ಅಂಥ ಪ್ರಕಾಶಕರ ಲೇಖಕರ ಮೇಲೆ ಕಾನೂನು ರೀತ್ಯ ಕ್ರಮ ಕೈಗೊಳ್ಳಬೇಕು. ಅಂತಹ ಲೇಖಕರು/ಪ್ರಕಾಶಕರೊಂದಿಗೆ ಸರ್ಕಾರವು ಯಾವುದೇ ಬಗೆಯ ವಹಿವಾಟು, ವ್ಯವಹಾರ ಮಾಡಬಾರದು.

ಎ. ರಾಜ್ಯದ ಎಲ್ಲಾ ಶಾಲಾ, ಕಾಲೇಜುಗಳಲ್ಲಿ ಕನಿಷ್ಠ ವಾರಕ್ಕೊಂದು ತರಗತಿಯನ್ನು ಕನ್ನಡ ಪುಸ್ತಕ ಓದಿಗೆ ಮೀಸಲಿಡಬೇಕು.

ಏ. ಕನ್ನಡ ಪುಸ್ತಕಗಳನ್ನು ವಿದೇಶದಲ್ಲಿ ನೆಮಿಸಿರುವ ಓದುಗರಿಗೆ ತಲುಪಿಸಲು ನೆರವಾಗಬೇಕು.

ಐ. ಕನ್ನಡ ಪುಸ್ತಕದ ಮುದ್ರಣಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ವಿಧಿಸಿರುವ ತೆರಿಗೆಗಳಿಗೆ ರಿಯಾಯಿತಿಗಳನ್ನು ನೀಡಬೇಕು.

ಒ. ರಾಜ್ಯದಲ್ಲಿ 'ಪುಸ್ತಕ ಕೂಟ' (ಬುಕ್ ಕ್ಲಬ್)ಗಳನ್ನು ಸ್ಥಾಪಿಸಲು ನೆರವಾಗಬೇಕು.

ಓ. ಗ್ರಂಥಸ್ವಾಮ್ಯ ಕಾನೂನು ೧೯೫೭, ಪುಸ್ತಕಗಳ ರವಾನೆ (ಸಾರ್ವಜನಿಕ ಗ್ರಂಥಾಲಯ) ಅಧಿನಿಯಮ ೧೯೫೪, ಮುದ್ರಣ ಮತ್ತು ಪುಸ್ತಕಗಳ ನೋಂದಣಿ ಅಧಿನಿಯಮ ೧೮೬೭, ಅಂತರಾಷ್ಟ್ರೀಯ ಗ್ರಂಥಸ್ವಾಮ್ಯ ಆದೇಶ ೧೯೯೯ರ ಬಗ್ಗೆ ಹಾಗೂ ಮಾನನಷ್ಟ, ರಾಜದ್ರೋಹ, ಮಿಥ್ಯಾರೋಪ, ಅಶ್ಲೀಲ ಪುಸ್ತಕಗಳ ಮಾರಾಟದ ಬಗ್ಗೆ ಇರುವ ಕಾನೂನು ಕುರಿತು ಅರಿವು ಮೂಡಿಸಬೇಕು.

### ೧೨. ಪುಸ್ತಕೋದ್ಯಾನ

ಕನ್ನಡ ಪುಸ್ತಕ ರಚನೆ, ಪ್ರಕಟಣೆ, ಮುದ್ರಣ, ವಿತರಣೆ, ಮಾರಾಟ ಹೀಗೆ ಪುಸ್ತಕ ಕ್ಷೇತ್ರದ ಎಲ್ಲಾ ಕಾರ್ಯಚಟುವಟಿಕೆಗಳಿಗೆ ಹಾಗೂ ಎಲ್ಲಾ ಪುಸ್ತಕ ವೃತ್ತಿಗಳಲ್ಲಿ ತರಬೇತಿ ನೀಡಲು ಒಂದು ಪುಸ್ತಕ ಸಂಗ್ರಹಾಲಯವನ್ನು ಒಳಗೊಂಡಂತೆ ರಾಜ್ಯದಲ್ಲಿ ಪುಸ್ತಕೋದ್ಯಾನವನ್ನು ಸ್ಥಾಪಿಸಬೇಕು.

## ೧೩. ಪ್ರಕಾಶನ ಶಿಕ್ಷಣ

ಕನ್ನಡ ಪ್ರಕಾಶನಕ್ಕೆ ಸಂಬಂಧಿಸಿದಂತೆ ಒಂದು ಅಧಿಕೃತ ಕೋರ್ಸನ್ನು ರಾಜ್ಯದ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದ ಸಹಕಾರದೊಂದಿಗೆ ಸ್ಥಾಪಿಸಬೇಕು.

## ೧೪. ರಾಜ್ಯದಲ್ಲಿ ಕನ್ನಡ ಪುಸ್ತಕೋದ್ಯಮ: ಮುಂದೆ

ಕನ್ನಡ ಪುಸ್ತಕೋದ್ಯಮ ಇಂದು ವ್ಯಾಪಕವಾಗಿ ಬೆಳೆದಿರುವಂತೆ ಅದು ಅನೇಕ ಸವಾಲುಗಳನ್ನು ಎದುರಿಸಬೇಕಾಗಿದೆ. ನೂರಾರು ಸಂಖ್ಯೆಯ ಪ್ರಕಾಶಕರು, ನೂರಾರು ಮಾರಾಟಗಾರರು ಇದ್ದು, ಪ್ರತಿವರ್ಷ ನೋಂದಾಯಿತ ಸುಮಾರು ಮೊದಲ ಮುದ್ರಣದ ೩೫೦೦ ಪುಸ್ತಕಗಳು ಹಾಗೂ ಸಾವಿರಾರು ಮರುಮುದ್ರಣಗಳ ಜೊತೆಗೆ ಯಾವ ರೀತಿಯಲ್ಲೂ ಗಮನಕ್ಕೆ ಬಾರದೆ ಹೋಗುವ ಸುಮಾರು ಸಾವಿರಾರು ಸಂಖ್ಯೆಯ ಪುಸ್ತಕಗಳು ಪ್ರಕಟವಾಗುತ್ತಿವೆ. ಜೊತೆಗೆ ಇ-ಪ್ರಕಟಣೆ ಕೂಡ ಕಾಲಿಡುತ್ತಿದೆ.

ಸ್ವಾತಂತ್ರ್ಯ ನಂತರ ಬ್ರಿಟಿಷರ ಸಂಕೋಲೆಗಳಿಂದ ಬಿಡುಗಡೆಗೊಂಡ ಪ್ರಕಟಣ ಉದ್ಯಮವು ಧೈರ್ಯದಿಂದ ಮುನ್ನುಗ್ಗುತ್ತಿದೆ. ಕನ್ನಡ ಪುಸ್ತಕ ಪ್ರಪಂಚವು ಇದರಿಂದ ಹಿಂದೆ ಬಿದ್ದಿಲ್ಲ. ಪ್ರಕಾಶನವೆಂಬುದು ಕೇವಲ ವ್ಯಾಪಾರ ಮಾತ್ರವಲ್ಲದೆ ಅದೊಂದು ಸಾಂಸ್ಕೃತಿಕ-ಶೈಕ್ಷಣಿಕ ಆಯಾಮವು ಆಗಿದೆ. ಅದೊಂದು ಸಾರ್ವಜನಿಕ ಹಿತಾಸಕ್ತಿಯ ಕಾರ್ಯವಷ್ಟೇ ಅಲ್ಲ ಒಂದು ಸಾಮಾಜಿಕ ಉದ್ದೇಶವುಳ್ಳ ವ್ಯತ್ತಿಯೂ ಹೌದು ಬದ್ಧತೆಯೂ ಹೌದು.

ಪುಸ್ತಕ ಇಂದು ಅನೇಕ ಸ್ಪರ್ಧೆಗಳನ್ನು ಎದುರಿಸಬೇಕಾಗಿದೆ. ಇಂಟರ್‌ನೆಟ್, ಇ-ಪ್ರಕಟಣೆ, ಪುಸ್ತಕಗಳಿಗಾಗಿಯೇ ಪ್ರತ್ಯೇಕ ವೆಬ್ ತಾಣಗಳು ಇವೇ ಮೊದಲಾದವು ಪುಸ್ತಕ ಪ್ರಕಟಣೆಗೆ ಅನೇಕ ರೀತಿಯಲ್ಲಿ ಸವಾಲುಗಳನ್ನು ಒಡ್ಡುತ್ತಿವೆ. ಅಂತರರಾಷ್ಟ್ರೀಯ ಮಟ್ಟದಲ್ಲಿ, ಪುಸ್ತಕೋದ್ಯಮವು ಒಡ್ಡುತ್ತಿರುವ ಸವಾಲುಗಳ ನಡುವೆ ಕನ್ನಡ ಪುಸ್ತಕ ಕ್ಷೇತ್ರದಂತಹ ಒಂದು ಪುಟ್ಟ ಪುಸ್ತಕ ಪ್ರಪಂಚವು ತನ್ನ ಅಳಿವು-ಉಳಿವುಗಳಿಗಾಗಿ ಹೋರಾಡಬೇಕಾಗಿದೆ. ಈ ಹೋರಾಟದಲ್ಲಿ ನೆರವಾಗಲೆಂಬ ಆಶಯ ಈ ಪುಸ್ತಕ ನೀತಿಯದು.

## ೧೫. ಸಮಿತಿ

ಪುಸ್ತಕ ನೀತಿ ಜಾರಿ ಪ್ರಕ್ರಿಯೆ, ಕಾರ್ಯವಿಧಾನ, ವಿವಿಧ ಇಲಾಖೆಗಳ ಜವಾಬ್ದಾರಿ, ಸಮನ್ವಯತೆ ಕುರಿತು ಸರ್ಕಾರವು ಕನ್ನಡ ಪುಸ್ತಕ ಪ್ರಾಧಿಕಾರದ ಸಹಯೋಗದೊಂದಿಗೆ ಒಂದು ಸಮಿತಿಯನ್ನು ನೇಮಿಸಬೇಕು.

ಸರ್ಕಾರವು ಪುಸ್ತಕ ನೀತಿ ಜಾರಿಗೆ ಪ್ರತ್ಯೇಕ ಸಮಿತಿ ನೇಮಿಸುವವರೆಗೆ ಕನ್ನಡ ಪುಸ್ತಕ ಪ್ರಾಧಿಕಾರವೇ ಈ ಪುಸ್ತಕ ನೀತಿ ಜಾರಿಗೆ ಜವಾಬ್ದಾರಿಯಾಗಿರಬೇಕು.*

***ಪುಸ್ತಕ ನೀತಿ ರೂಪಿಸಿದ ಸಮಿತಿ**

ಡಾ. ಸಿದ್ಧಲಿಂಗಯ್ಯ, ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

ಸದಸ್ಯರು : ಪ್ರೊ ಎಂ. ಎಚ್. ಕೃಷ್ಣಯ್ಯ, ಡಾ. ವಿಜಯಾ, ಡಾ. ರಮಾಕಾಂತ ಜೋಶಿ, ಶ್ರೀ ಡಿ. ಎನ್. ಲೋಕಪ್ಪ
ಶ್ರೀ ಪ್ರಕಾಶ್ ಕಂಬತ್ತಳ್ಳಿ, ಡಾ. ಕರೀಗೌಡ ಬೀಚನಹಳ್ಳಿ, ಶ್ರೀ ಜೆ. ಎನ್. ಶಾಮರಾವ್,
ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ
ಆಡಳಿತಾಧಿಕಾರಿಗಳು, ಕನ್ನಡ ಪುಸ್ತಕ ಪ್ರಾಧಿಕಾರ

# ಸಂಚಿಕೆಯ ಲೇಖಕರು

**ಪ್ರೊ ಎಲ್.ಎಸ್. ಶೇಷಗಿರಿರಾವ್** "ಪಾರಿಜಾತ", ೧೧, ೫ನೇ ಅಡ್ಡರಸ್ತೆ, ೨೧ನೇ ಮುಖ್ಯರಸ್ತೆ, ಮಾರೇನಹಳ್ಳಿ, ಜೆ.ಪಿ. ನಗರ, ಬೆಂಗಳೂರು - ೭೮.

**ಡಾ। ಪ್ರಧಾನ್ ಗುರುದತ್ತ** ಅಧ್ಯಕ್ಷರು, ಕುವೆಂಪು ಭಾಷಾಭಾರತಿ ಪ್ರಾಧಿಕಾರ, ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾನಿಲಯ ಆವರಣದ ಹಿಂಭಾಗ ಮಲ್ಲತ್ತಳ್ಳಿ, ಬೆಂಗಳೂರು 560056.

**ಡಾ। ವಿಜಯಾ** ನಂ. ೩೬, ೪೦ನೇ ಅಡ್ಡರಸ್ತೆ, ರಾಘವ ನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೫೬೦ ೦೨೬, ದೂರವಾಣಿ:೯೮೮೦೭೦೬೪೮೧೯

**ಡಾ। ರಮಾಕಾಂತ ಜೆ. ಜೋಶಿ** ಮನೋಹರ ಗ್ರಂಥಮಾಲಾ, ಲಕ್ಷ್ಮೀಭವನ, ಸುಭಾಶ್ ರೋಡ್, ಧಾರವಾಡ - ೫೮೦ ೦೦೧. ದೂರವಾಣಿ: ೦೮೩೬ ೨೪೪೧೮೨೨ (ಕ) ೨೪೪೭೦೦೨ (ಮ), ಮೊಬೈಲ್: ೦-೯೮೪೫೭೪೧೮೨೨

**ಪ್ರೊ ಜಿ. ಅಶ್ವತ್ಥನಾರಾಯಣ** ೯೫, ೩೪ನೇ 'ಬಿ' ಕ್ರಾಸ್, ೧೬ನೇ ಮುಖ್ಯರಸ್ತೆ, ೪ 'ಟಿ' ಬ್ಲಾಕ್ ಜಯನಗರ, ಬೆಂಗಳೂರು ೫೬೦೦೪೧ ದೂರವಾಣಿ : ೦೮೦ ೨೬೬೩೭೭೮೩

**ಎಸ್. ದಿವಾಕರ್** ಪ್ರಧಾನ ಸಂಪಾದಕರು, ವಸಂತ ಪ್ರಕಾಶನ, ೩೬೦, ೧೦ನೇ 'ಬಿ' ಮುಖ್ಯರಸ್ತೆ, ೩ನೇ ಬ್ಲಾಕ್, ಜಯನಗರ, ಬೆಂಗಳೂರು ೫೬೦೦೧೧. ದೂರವಾಣಿ : ೦೮೦ ೨೨೪೪೩೯೬, diwasurya@gmail.com

**ಡಾ। ಅ.ಲ. ನರಸಿಂಹನ್** ೧೩, ೧ನೇ ದೇವಾಲಯ ರಸ್ತೆ, ೧೫ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು ೫೬೦೦೦೩. ದೂರವಾಣಿ: ೦೮೦ ೨೩೪೬೮೮೦೫

**ವೈ.ಜಿ.ಮುರಳೀಧರ** ೨೩೯, ೫ನೇ ಸಿ ರಸ್ತೆ, ರೆಂಕೋ ಬಡಾವಣೆ, ಹಂಪಿನಗರ, ಬೆಂಗಳೂರು 560104. ದೂ: ೦೮೦ - ೨೩೪೦೩೧೭೦, ಮೊಬೈಲ್: ೯೪೪೮೧೪೫೧೭೦, ಈಮೇಲ್: *creatorg@sify.com* <creatorg@sify.com>

**ಎಸ್.ಆರ್. ರವಿಪ್ರಕಾಶ್** ಅಡ್ವೋಕೇಟ್, ನಂ. ೧೯೪, "ಕಾವ್ಯಸ್ಕಂದ", ೨ನೇ 'ಎ' ಕ್ರಾಸ್, ೪ನೇ ಮೇನ್, ಶಂಕರನಗರ, ಮಹಾಲಕ್ಷ್ಮೀ ಲೇಔಟ್, ಬೆಂಗಳೂರು-೫೬೦೦೯೬. ದೂ: ೦೮೦ ೨೨೩೭೪೯೪೦, srraviprakash@vsnl.net

**ಡಾ। ಎಸ್.ಆರ್. ರಾಮಸ್ವಾಮಿ** ಗೌ। ಪ್ರಧಾನ ಸಂಪಾದಕರು, 'ಉತ್ಥಾನ' ಮಾಸಪ್ರತಿಕೆ, ಕೇಶವಶಿಲ್ಪ, ಕೆಂಪೇಗೌಡ ನಗರ, ಬೆಂಗಳೂರು-೧೯. ದೂರವಾಣಿ: ೨೬೬೧೨೭೩೦

**ಪ್ರಕಾಶ್ ಕಂಬತ್ತಳ್ಳಿ** ಅಂಕಿತ ಪುಸ್ತಕ, ೫೩, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು ೫೬೦೦೦೪. ದೂರವಾಣಿ: ೦೮೦ ೨೬೬೧೭೧೦೦

**ಆರ್.ಡಿ.ಜಿ.** ವ್ಯವಸ್ಥಾಪಕರು, ಸಪ್ನ ಬುಕ್ ಹೌಸ್, ೩ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು ೫೬೦೦೦೯. ದೂರವಾಣಿ: ೦೮೦ ೪೦೧೧೪೪೫೫

ಪುಸ್ತಕ ಲೋಕ



ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ

**PUSTAKALOKA** - Kannada quarterly (No. MAG(1) NPT/116/2007-08)
Vol. : 2, Issue : 3, January - March, 2011
Published by **B H Mallikarjuna,** K.C.A.S, Administrator, Kannada Book Authority
Kannada Bhavana, J.C. Road, Bangalore 560002. Tel: +91-80-22484516
Chief Editor: **Dr. Siddalingaiah.** Editor: **J.N. Shama Rao.**
Cover Page and Design : **U.T. Suresh**
Printed at: **Raja Printers,** Bangalore 560027